# ಅರಿಕೆ

ಸುಪ್ರಸಿದ್ಧ ಕನ್ನಡ ಸಾಹಿತಿಗಳಾದ ಶ್ರೀ. ಅ. ನ. ಕೃಷ್ಣರಾಯರ ಕೃತಿಗಳನ್ನೆಲ್ಲ ಪ್ರಕಟಿಸಬೇಕೆಂದಿರುವ, ನಮ್ಮ ಯೋಜನೆಯಲ್ಲಿ ಈಗಾಗಲೆ 'ರಜಪೂತ ಲಕ್ಷ್ಮಿ'ಯನ್ನು ಕನ್ನಡಿಗರ ಮುಂದಿಟ್ಟಿದ್ದೇವೆ. ಸದ್ಯದಲ್ಲಿಯೇ ಅವರ ಹೊಸ ಕಾದಂಬರಿ ಮತ್ತು ಇತರ ಕೃತಿಗಳು ಹೊರಬೀಳುವುವು.

ಲೇಖಕರ ಹೊಸ ಕೃತಿಗಳನ್ನು ಪ್ರಕಟಿಸುವುದು ಪ್ರಕಾಶಕರ ಬಯಕೆ ಮತ್ತು ಮುಖ್ಯ ಕೆಲಸ; ನಿಜ. ಆದರೆ ಇಂಥ ಪ್ರಸಿದ್ಧ ಲೇಖಕರ ಹಲವಾರು ಉತ್ತಮ ಕೃತಿಗಳು ಪುನಃ ಮುದ್ರಣವನ್ನೇ ಕಾಣದಿರುವುದು ಶೋಚನೀಯ. ಹೊಸ ಪುಸ್ತಕ ಹೊರತಂದರೆ ಪ್ರಕಾಶಕರ ಕೆಲಸ ಮುಗಿದಂತಲ್ಲ, ಪುನರ್ಮು ದ್ರಣಗಳನ್ನೂ ಸಕಾಲದಲ್ಲಿ, ಶೀಘ್ರವಾಗಿ ತರಬೇಕೆಂಬುದು ನಮ್ಮ ಮತ. ಆದ್ದರಿಂದ ಶ್ರೀಯುತರ 'ಗೋಮುಖ ವ್ಯಾಘ್ರ' ಕನ್ನಡಿಗರಿಗೆ ಪುನಃ ದೊರೆತಿದೆ. ಈಗ ಈ 'ಜೀವನಯಾತ್ರೆ' ಹೊರಟಿದೆ. ಬಲು ಬೇಗ 'ಸಾಹಿತ್ಯ ರತ್ನ' ಬರಲಿದೆ.

ಎಂದಿನಂತೆ ನಮ್ಮ ಕೆಲಸದಲ್ಲಿ ತುಂಬ ವಿಶ್ವಾಸವಿಟ್ಟು, ಈ ಪುಸ್ತಕವನ್ನು ಸುಂದರವಾಗಿ ಅಚ್ಚು ಮಾಡಿಕೊಟ್ಟುದಕ್ಕಾಗಿ ಶ್ರೀ. ಆರ್. ಎನ್. ಹಬ್ಬು ಅವರಿಗೆ ನಮ್ಮ ವಂದನೆಗಳು.

ಪ್ರಕಾಶಕರು

# ಮುನ್ನುಡಿ

ಹೊಸಗನ್ನಡ ಸಾಹಿತ್ಯದ ಉಷಃಕಾಲ–ಹನ್ನೆರಡು ವರ್ಷಗಳ ಹಿಂದಿನ ಮಾತು. ನನ್ನ ಮೊದಲನೆಯ ಕಾದಂಬರಿ 'ಜೀವನಯಾತ್ರೆ' ಪ್ರಕಟವಾಯಿತು. ಸುತ್ತ ನಾಲ್ಕು ಕಡೆಯಿಂದ ಲತ್ತಾಪ್ರಹಾರ ಆರಂಭವಾಯಿತು. ಜೀವನಯಾತ್ರೆ ಹೊಸಹೊದಿಕೆಯನ್ನು ಹೊದೆದು ಹೊರಬಂದಿತ್ತು. ರೂಢಮೂಲವಾದ ನಮ್ಮ ನೀತಿಕಲ್ಪನೆಗೆ ಅದು ಬಲವಾದ ಪೆಟ್ಟು ಹಾಕಿತ್ತು. ಸಮಾಜದ ನೀತಿ (?) ರಕ್ಷಕರು ಕೆರಳಿ, ಕನಲಿ, ಕಿಡಿಕಾರುತ್ತ ನಿಂತರು. ಈ ಗ್ರಂಥ ಬರೆದವನು ಸತ್ತರೂ ಒಳ್ಳೆಯದೇ ಎಂದರು; ಬ್ರಾಹ್ಮಣ ಮಾತಾಪಿತ ಸಂಜಾತನಾದ ಲೇಖಕನು ಇಂತಹ ಹೊಲಸು, ಪುಸ್ತಕ ಬರೆಯುವುದೇ ಎಂದರು. ಆದರೆ ಲೇಖಕನ ಲೇಖನಿ ಅವ್ಯಾಹತವಾಗಿ ಸಾಗುತ್ತ ಬಂದಿದೆ. ಕನ್ನಡನಾಡಿನಲ್ಲಿ ವಿಚಾರಶಕ್ತಿಯನ್ನು ಕೆರಳಿಸಬೇಕೆಂಬ ಅವನ ಆಸೆ ಕೈಗೂಡುತ್ತ ಬಂದಿದೆ. ಅಂತೇ ಹನ್ನೆರಡು ವರ್ಷಗಳ ಮೇಲಾದರೂ 'ಜೀವನಯಾತ್ರೆ' ಎರಡನೆಯ ಮುದ್ರಣವನ್ನು ಕಾಣುವ ಸುಯೋಗ ಪಡೆದದ್ದು.

'ಜೀವನಯಾತ್ರೆ' ಯನ್ನು ಅನೀತಿಸಾರುವ ಕಾದಂಬರಿಯೆಂದು ಚೀರಿದ ಮಹನೀಯರು ಸ್ವಲ್ಪ ವಿಚಾರ ಮಾಡಿನೋಡಿದ್ದರೆ ಇದಕ್ಕಿಂತ ಪರಮ ನೀತಿ ಸಾರುವ ಕಾದಂಬರಿಯಿಲ್ಲವೆಂಬ ಸತ್ಯ ಹೊಳೆಯುತ್ತಿತ್ತು. ಸಮಾಜದೇಹವನ್ನು ಕೊರೆಯುತ್ತಿರುವ ಅನೀತಿಕೀಟವನ್ನು ನಿವಾರಿಸಲು ಹೊರಟ ಕಾದಂಬರಿ 'ಜೀವನಯಾತ್ರೆ'. ವ್ಯಭಿಚಾರ, ರೋಗ, ದಾಸ್ಯಗಳೆಲ್ಲದರ ಹಿಂದೆ 'ಹಸಿವು' ಹೆಬ್ಬಾವಿನಂತೆ ಬಾಯ್ತೆರೆದು ಕುಳಿತಿದೆಯೆಂಬುದನ್ನು ತೋರಿಸಿಕೊಡಲು 'ಜೀವನಯಾತ್ರೆ' ಉದ್ದೇಶಿಸಿದೆ.

ಎರಡನೆಯ ಮುದ್ರಣಕ್ಕೆ ಹಸ್ತಪ್ರತಿಯನ್ನು ಸಿದ್ಧಗೊಳಿಸುವಾಗ ಕಾದಂಬರಿಯನ್ನು ವಿಸ್ತರಿಸಿ ಬರೆಯಬೇಕೆಂದು ಯೋಚಿಸಿದೆ. ಆದರೆ ಈಗಿನ ರೂಪದಲ್ಲಿಯೇ ಅಂದಿನ ಕೃತಿಯನ್ನು ಓದುಗರೆದುರಿಗಿಡುವುದು ಒಳ್ಳೆಯ

ದೆಂದು ನಿರ್ಧರಿಸಿದೆ. ಅಲ್ಲಲ್ಲಿ ಒಂದೊಂದು ಶಬ್ದ ಒಂದೊಂದು ರೂಪಗಳನ್ನು ವ್ಯತ್ಯಾಸ ಮಾಡುವಷ್ಟರಲ್ಲಿಯೇ ತೃಪ್ತನಾಗಿದ್ದೇನೆ. ಗ್ರಂಥಸಾರವನ್ನು ತಿಳಿಸುವ ಪ್ರಬಂಧವನ್ನು 'ಹಿನ್ನುಡಿ'ಯಾಗಿ ಪ್ರಕಟಿಸಿದ್ದೇನೆ.

ಈ ಮುದ್ರಣವನ್ನು ಪ್ರಕಟಿಸುವ ಭಾರಹೊತ್ತ ಮಾಧವ ಸನ್ಸ್ ಅವರಿಗೆ ನಾನು ಋಣಿ.

'ಅನ್ನಪೂರ್ಣ'
ವಿಶ್ವೇಶ್ವರಪುರಂ, ಬೆಂಗಳೂರು ನಗರ
೨೨-೨-೧೯೪೬

ಅ. ನ. ಕೃಷ್ಣರಾಯ

"When a man and woman have a Violent passion for one another, it always seems to me that whatever the obstacles that seperate them, whether Husband or parents, etc., the two lovers belong to each other by Nature and Divine Right, despite human conventions and laws."

—*Chamfort.*

# ಜೀವನಯಾತ್ರೆ

## ೧

ಒಂದು ಊರಿನ ಗಲಭೆಯ ಸ್ಥಳಗಳಲ್ಲಿ ಅದರ ಮಾರ್ಕೆಟ್ಟೊಂದೆಂದು ಸಾಮಾನ್ಯವಾಗಿ ಎಲ್ಲರೂ ಭಾವಿಸುವುದುಂಟು. ಬೆಂಗಳೂರಿನಂತಹ ಊರಿನಲ್ಲಿ ಅದು ಮಹಾ ಗಲಭೆಯ ಸ್ಥಳವೆಂದರೂ ತಪ್ಪಾಗದು. ಅದು ಹಗಲಿರುಳುಗಳನ್ನರಿಯದ ಒಂದು ಗಲಭೆಯ ಮೂರ್ತಿ. ಒಂದು ಕಡೆ ಮಾರಾಟಗಾರರ ಗಲಭೆ; ಒಂದು ಕಡೆ ಕೊಳ್ಳುವವರ ಗಲಭೆ. ಒಂದು ಕಡೆ ಸಣ್ಣಪುಟ್ಟ ಕೈಗೆಲಸ (Pick-Pocketing) ಮಾಡುವವರ ಗಲಭೆ; ಒಂದು ಕಡೆ ಅವುಗಳನ್ನು ಪತ್ತೆಮಾಡುವ ಪೋಲೀಸರ ಗಲಭೆ. ಒಂದು ಕಡೆ ಸುಂಕ ಎತ್ತುವವರ ಗಲಭೆ; ಒಂದು ಕಡೆ ಅದನ್ನು ತಪ್ಪಿಸಿಕೊಳ್ಳುವವರ ಗಲಭೆ— ಇವುಗಳ ಜತೆಗೆ ದೊಡ್ಡ ಗಡಿಯಾರದ ಘಂಟಾವಾದನ—ಭಿಕ್ಷುಕರ ಶಂಖವಾದನ—ವಾರಕ್ಕೊಮ್ಮೆ ವಾಲಗದ ಗಲಭೆ ಬೇರೆ. ಅಂತೂ ಗಲಭೆಯನ್ನು ಕೇಂದ್ರೀಕರಿಸುವುದಕ್ಕೇ ನಗರಸಭೆಯವರು ಲಕ್ಷಗಟ್ಟಳೆ ಹಣವ್ಯಯಮಾಡಿ ವಿಶಾಲವಾದ ಮಳಿಗೆಗಳನ್ನೊಳಗೊಂಡ ಮಾರ್ಕೆಟ್ಟಿನ ಭವ್ಯಕಟ್ಟಡವನ್ನು ಕಟ್ಟಿಸಿದ್ದಾರೆಯೋ ಏನೋ?

ಮಾರ್ಕೆಟ್ಟು ವ್ಯಾಪಾರಕ್ಕೂ ಗಲಭೆಗೂ ಹೇಗೆ ಕೇಂದ್ರಸ್ಥಾನವೋ ಹಾಗೇ ವಿಹಾರಕ್ಕೂ ಕೇಂದ್ರಸ್ಥಾನವಾಗಿ ಪರಿಣಮಿಸಿತ್ತು. ಹಾವಾಡಿಸುವವರಿಗೆ, ಡೊಂಬರಿಗೆ, ಯೋಗಾಸನಗಳನ್ನು ಹಾಕಿ ತೋರಿಸುವ ಸಾಧುಗಳಿಗೆ ಔಷಧ ಮಾರಲು ಇಸ್ಪೇಟಿನ ಚಳಕಗಳನ್ನು ತೋರಿಸುವವರಿಗೆ, ನರ್ತಕಿಯರಿಗೆ, ಗಾಯಕರಿಗೆ, ಲಾವಣಿಕಾರರಿಗೆ, ಮುಲ್ಲಾಶಾಸ್ತ್ರ ಹೇಳುವವರಿಗೆ— ಎಲ್ಲರಿಗೂ ಅನುಕೂಲವಾದ ಕ್ಷೇತ್ರವಾಗಿತ್ತು. ಜನಸಂದಣಿ ಅಪಾರವಾಗಿ ಸೇರುತ್ತಿದ್ದುದರಿಂದ ಅದರ ಉಪಯೋಗವನ್ನು ಪಡೆಯಲು ಅನೇಕರು ಮುಂದುವರಿಯುತ್ತಿದ್ದರು. ಆರ್ಯ ಸಮಾಜವನ್ನು ಪ್ರಚುರಗೊಳಿಸುತ್ತಾ ಒಬ್ಬನ ಉಪನ್ಯಾಸ; ಅದನ್ನು ವಿರೋಧಿಸಿ ಕ್ರಿಸ್ತಧರ್ಮವನ್ನು ಬೋಧಿಸುವ ಇನ್ನೊಬ್ಬನ ಉಪನ್ಯಾಸ; ಮದ್ಯಸೇವನೆಯ ನಿಷೇಧವನ್ನುಪದೇಶಿಸುವ ಮತ್ತೊಬ್ಬನ

ಉಪನ್ಯಾಸ; ಕಾಂಗ್ರೆಸ್ಸಿಗೆ ಕಾಸು ಕೊಡಿರೆಂದು ಬೇಡುವ ಮುಗದೊಬ್ಬನ ಉಪನ್ಯಾಸ—ಹೀಗೆ ಉಪನ್ಯಾಸಗಳ ಸುರಿಮಳೆ. ಈ ಗಲಭೆಯಲ್ಲಿ ಯಾರಿಗೂ ಪುರುಸೊತ್ತಿಲ್ಲ. ಎಲ್ಲರೂ ಒಂದಲ್ಲೊಂದರಲ್ಲಿ ಆಸಕ್ತರು. ಈ ನೂಕು ನುಗ್ಗಾಟ ಜಗತ್ತೇ ಯಾವದೋ ಭಯಂಕರ ಗೊಂದಲಕ್ಕೆ ಸಿಕ್ಕಿಬಿದ್ದು ಪಾರುಗಾಣುವ ಬಗೆಯನ್ನು ಕಾಣದೆ ನರಳುತ್ತಿದೆಯೇನೋ ಎನ್ನಿಸುತ್ತಿತ್ತು.

ಆದರೆ ರಾಮಕ್ಕ ಮಾತ್ರ ತನ್ನ ಜೀವನಯಾತ್ರೆಯನ್ನು ನಿರ್ಬಾಧಿತಳಾಗಿ ಸಾಗಿಸುತ್ತಿದ್ದಳು. ಅವಳು ಯಾರು?—ಅಲ್ಲಿಗೆ ಹೇಗೆ ಬಂದಳು?—ಅಲ್ಲಿಗೆ ಬರುವುದಕ್ಕೆ ಮುಂಚೆ ಎಲ್ಲಿದ್ದಳ—ಏನು ಮಾಡುತ್ತಿದ್ದಳು ಎಂದು ವಿಚಾರಿಸಲು ಯಾರಿಗೂ ಮನಸ್ಸು ಬಾರದು—ವ್ಯವಧಾನವೂ ಇಲ್ಲ. ಎಂದೋ ಒಮ್ಮೆ ಮಾರ್ಕೆಟ್ಟಿನ ಮಹಾಜನಕ್ಕೆ ಕ್ರಿಸ್ತಧರ್ಮವನ್ನು ಬೋಧಿಸುತ್ತಿದ್ದ ರೆ॥ ಪಿಕ್ಲಿಂಗ್ ಪಾದ್ರಿ ರಾಮಕ್ಕನ ಕಷ್ಟಸುಖವನ್ನು ವಿಚಾರಿಸಲು ಪ್ರಯತ್ನಿಸಿ ವಿಫಲ ಮನೋರಥನಾಗಿದ್ದ. ಬೆಳಗ್ಗೆ ಒಂಭತ್ತು ಹತ್ತು ಘಂಟೆಗೆ ಕೆಲವು ಚಕ್ಕುಲಿ, ಕೋಡಬಳೆಗಳನ್ನೂ, ಕೊಬ್ಬರಿ ಮಿಠಾಯಿ, ರವೆ ಉಂಡೆಗಳನ್ನೂ ತಂದಿಟ್ಟುಕೊಂಡು ಮಾರ್ಕೆಟ್ಟಿನ ಎದುರುಗಡೆ ಮರದ ಕೆಳಗೆ ಕುಳಿತಳೆಂದರೆ ಅವು ಮಾರಾಟವಾದರೇನೇ ಅವಳು ಆ ಸ್ಥಳವನ್ನು ಬಿಟ್ಟೇಳುವುದು. ಒಂದೊಂದು ದಿವಸ ಸೂರ್ಯ ಮುಳುಗಿದ್ದರೂ ರಾಮಕ್ಕನ ಸಾಮಾನುಗಳ ಮಾರಾಟ ಮುಗಿಯುತ್ತಿರಲಿಲ್ಲ; ಆಗ ಉಳಿದಿದ್ದ ಸಾಮಾನುಗಳನ್ನು ಬುಟ್ಟಿಗೆ ತುಂಬಿಕೊಂಡು ನಿಟ್ಟುಸಿರುಬಿಡುತ್ತಾ ಎದ್ದೇಳುವಳು, ಕಣ್ಣಿನಲ್ಲಿ ಒಂದೆರಡು ಹನಿ ಅವಳ ಹಿಡಿತ ತಪ್ಪಿ ಉರುಳುತ್ತಿದ್ದವು.

ರಾಮಕ್ಕ ತನ್ನ ಅಂಗಡಿಯಿಂದ ಮನೆಗೆ ಬಹು ದೂರ ನಡೆದು ಹೋಗ ಬೇಕಾಗಿತ್ತು. ಬಸವನಗುಡಿಯ ಆಚೆ ಬಡವರ ಮನೆಗಳ ಸಾಲಿನಲ್ಲಿ ತೀರ ಬಡಕಲಾದ ಗುಡಿಸಲೇ ಅವಳದು. ಮನೆಯನ್ನು ತಲಪಿ ಹಣತೆ ಹಚ್ಚಿ, ಅದೇ ಕಡ್ಡಿಯಿಂದ ಒಲೆ ಹಚ್ಚಿ ಹಸಿದಿದ್ದ ಮಕ್ಕಳಿಗೆ ಅನ್ನ ಬೇಯಿಸಿ ಹಾಕ ಬೇಕಾಗಿತ್ತು. ಆಡಿ ಬಂದು ಬಳಲಿ ಹಸಿದು, ಪುಟ್ಟು ಹಾಗೆಯೇ ಮಲಗಿ ನಿದ್ರಿಸಿಬಿಡುತ್ತಿದ್ದ. ಸುಂದರಾ ಅವನ ಬಳಿ ಕುಳಿತು ಅಜ್ಜಿ ಬರುವ ದಾರಿಯನ್ನೇ ಕಾಯುತ್ತಾ ತನಗೆ ಬರುತ್ತಿದ್ದ ಒಂದೆರಡು ಹಾಡುಗಳನ್ನೇ ಮತ್ತೆ ಮತ್ತೆ ಹಾಡಿಕೊಳ್ಳುತ್ತಾ ಹೊತ್ತು ನೂಕುತ್ತಿದ್ದಳು. ಎದುರಿಗೆ ತಾನೇ

ತಾನಾಗಿ ಬೆಳೆದು ನಿಂತಿದ್ದ ವಿಶಾಲವಾದ ಬಿದಿರುಮೆಳೆ—ದೂರದಲ್ಲಿ ಕಾಣು ತ್ತಿದ್ದ ಎತ್ತರವಾದ ಮರಗಿಡಗಳು, ಅವುಗಳನ್ನು ಅಪ್ಪಿ ನಿಂತಿದ್ದ ಗುಡ್ಡಗಳು. ಸಂಜೆ ಮೂಡಿತೆಂದರೆ ಕೇಳಿಬರುತ್ತಿದ್ದ ಗಭೀರವಾದ ಒಂದು ಬಗೆಯ ಶಬ್ದ; ಮಧ್ಯೆ ಮಧ್ಯೆ ನಾಯಿಗಳ ಬೊಗಳಾಟ; ಬೀದಿಯಲ್ಲಿ ಹೋಗುತ್ತಿದ್ದವರ ಉದ್ದ ನೆಯ ಕರಿನೆರಳು ಮನೆಯನ್ನು ಹೊಕ್ಕು ಹೋಗುವುದು—ಇವೆಲ್ಲ ಸುಂದರನ ಎಳೆ ಮನಸ್ಸಿನಲ್ಲಿ ಭಯದ ಬೆಳೆಯನ್ನು ನಾಟುತ್ತಿದ್ದವು. ಎಷ್ಟೋ ಬಾರಿ ಅತ್ತು ಅತ್ತು ಸಾಕಾಗಿ ಅವಳೂ ಮಲಗಿಬಿಡುವಳು. ಆಗ ಯಾರೋ ಎಬ್ಬಿಸಿ ದಂತಾಗಿ ಅನ್ನದ ಬಿಸಿಹವೆ ಮುಖದ ಮೇಲೆ ಬೀಸಿತೆಂದರೆ ಸುಂದರನಿಗೆ ಹೊಸ ಜೀವ ಬಂದಂತಾಗುತ್ತಿತ್ತು. ಊಟ ಮುಗಿದ ಮೇಲೆ ಅಜ್ಜಿಯ ಬಳಿ ಕುಳಿತು ಕಥೆ ಕೇಳುತ್ತ ಕೇಳುತ್ತ ಹಾಗೆಯೇ ನಿದ್ರೆ ಹೋಗಿಬಿಡುತ್ತಿದ್ದಳು. ಒಂದು ಕಡೆ ಪುಟ್ಟೂ, ಒಂದು ಕಡೆ ಸುಂದರಾ ಇಬ್ಬರನ್ನೂ ಮಲಗಿಸಿಕೊಂಡು ಮಧ್ಯೆ ರಾಮಕ್ಕ ಅವರಿಬ್ಬರ ಮೇಲೆಯೂ ಒಂದೊಂದು ಕೈಚಾಚಿಕೊಂಡು ಮಲಗಿ ಕೊಳ್ಳುವಳು. ಹಗಲಿರುಳೂ ಅವಳಿಗೆ ಒಂದೇ ಚಿಂತೆ—ಆ ಮಕ್ಕಳ ಚಿಂತೆ. ಪುಟ್ಟೂಗಿನ್ನೂ ಆರೇ ವರ್ಷ. ಅವನು ಬೆಳೆಯುವುದು ಹೇಗೆ—ವಿದ್ಯಾವಂತ ನಾಗುವುದು ಹೇಗೆ, ತನ್ನ ಅಕ್ಕನಿಗೆ ಮದುವೆ ಮಾಡುವುದು ಹೇಗ ಎಂಬಿವೇ ಯೋಚನೆಗಳು ಅವಳನ್ನು ಕಾಡುವವು. ಸುಂದರಾ ಕನಸಿನ ಕನಲಿಕೆಗೆ ಸಿಕ್ಕಿ ಬಡಬಡಿಸಿದರೆ ಅವಳನ್ನು ಎದೆಗೆ ಅವುಚಿಕೊಂಡು ಮುದ್ದು ಮುದ್ದು ಮಾತು ಗಳನ್ನಾಡುತ್ತಾ ಹಾಗೆಯೇ ರಾತ್ರಿಯನ್ನು ಕಳೆಯಲೆತ್ನಿಸುವಳು.

ಬೆಳಗಾದರೆ ಅದೇ ಯಾತ್ರೆ; ಅದೇ ಜೀವನ; ಅದೇ ಬಗೆಹರಿಯದ ಬಾಳು. ವರ್ಷನಾಗುತ್ತ ಆಗುತ್ತ ರಾಮಕ್ಕನ ಆಯುಸ್ಸು ಕ್ಷಯಿಸುತ್ತ ಬಂದಿತು. ಸುಂದರನಿಗೆ ಹತ್ತನೆಯ ವಯಸ್ಸು ತುಂಬುತ್ತ ಬಂದಿತ್ತು. ಅವಳ ಭವಿಷತ್ತನ್ನು ಯೋಚಿಸಿ ಯೋಚಿಸಿ ರಾಮಕ್ಕನ ಯೋಚನಾ ಶಕ್ತಿಯೇ ಕುಂದಿಹೋಗಿತ್ತು. ಮದುವೆ ಮಾಡಿ ಗಂಡನ ಮನೆಗೆ ಕಳುಹಿಸುವುದೆಂದರೆ 'ಗಂಡ' ನನ್ನು ಎಲ್ಲಿಂದ ತನ್ನಂತಹ ದರಿದ್ರ ಹೆಂಗಸು ತರುವುದು? ಮದುವೆಗೆ ಹಣವನ್ನಾದರೂ ಎಲ್ಲಿ ಹೊಂದಿಸುವುದು? ತನ್ನ ಸ್ಥಿತಿಗತಿಯನ್ನು ನೋಡಿ ಸುಂದರನನ್ನು ಮದುವೆಯಾಗಲು ಯಾರು ಒಪ್ಪುವರು. ಇವೇ ಚಿಂತನೆಗಳಿಗೆ ಈಡಾಗಿ ತನ್ನ ವ್ಯಾಪಾರವನ್ನೂ ಮರೆತು ಮಂಕಳಂತೆ ಮಾರ್ಕೆಟ್ಟಿನ ಮುಂದೆ

ತನ್ನ ಸ್ಥಳದಲ್ಲಿ ತಿಂಡಿಯ ತಟ್ಟೆಯನ್ನು ಮುತ್ತುತ್ತಿದ್ದ ನೊಣಗಳನ್ನು ಯಂತ್ರದಂತೆ ಝಾಡಿಸುತ್ತಾ ಕುಳಿತುಕೊಂಡಿರುವಳು. ಯಾರಾದರೂ ವ್ಯಾಪಾರ ಮಾಡಿದರೆ ಕಕ್ಕುಬಿಕ್ಕಾಗಿ 'ಆ' ಅನ್ನುವಳು.

ಒಂದು ದಿನ ಕ್ರಿಸ್ತಮತಬೋಧಕರೊಂದಿಗೆ ತಾಳತಂಬೂರಿಗಳೂ ಬಂದುವು. ರೆವರೆಂಡ್ ಪಿಕ್ಲಿಂಗ್ ಸಾಹೇಬರು ಯೇಸೂ ಕಥೆಯನ್ನು ಆರಂಭಿಸಿದರು, ಅವರ ಮಿತ್ರರು ಒಬ್ಬರು ಪಿಟೀಲು ಬಾರಿಸಿದರು, ಇನ್ನೊಬ್ಬರು ಮೃದಂಗದ ಮೇಲೆ ಕೈಯಾಡಿಸಿದರು. ಪಿಕ್ಲಿಂಗ್ ಸಾಹೇಬರು ಯೇಸುವಿನ ಗುಣಕಥನ ಮಾಡುತ್ತಾ "ಎಲ್ಲರೂ ಬನ್ನಿ. ಬಡವರೇ ನೀವು ಬನ್ನಿ; ಭಾಗ್ಯವಂತರೇ ನೀವೂ ಬನ್ನಿ. ಪಾಪಿಗಳೇ ನೀವು ಬನ್ನಿ, ಪುಣ್ಯವಂತರೇ ನೀವೂ ಬನ್ನಿ. ಯೇಸೂಸ್ವಾಮಿ ಸ್ವರ್ಗದ ಬಾಗಿಲ ಬಳಿ ನಿಂತು ಎಲ್ಲರನ್ನೂ 'ಬನ್ನಿ ಬನ್ನಿ' ರೆಂದು ಕರೆಯುತ್ತಿದಾನೆ. ನಿಮ್ಮ ಸುಳ್ಳು ದೇವರುಗಳನ್ನು ಮರೆತು ಯೇಸೂಸ್ವಾಮಿಯ ಬಳಿಗೆ ಬನ್ನಿ. ನಿಮಗೆ ಬೇಕಾದದ್ದೆಲ್ಲವನ್ನೂ ಅವನು ಕೊಡುತ್ತಾನೆ. ಅವನೇ ಕೊಡುವವನು—ಅವನೇ ದಾನಿ—ಅವನೇ ಕರ್ತನು" ಎಂದು ಹೇಳುತ್ತಿದ್ದರು. ಇದು ರಾಮಕ್ಕನಿಗೆ ಹೊಸದೇನೂ ಆಗಿರಲಿಲ್ಲ. ಪಿಕ್ಲಿಂಗ್ ಸಾಹೇಬರ 'ಸುವಾರ್ತೆ' ಗಳನ್ನು ಕೇಳಿಕೇಳಿ ಅವಳೇ ಅವುಗಳನ್ನು ಅಕ್ಷರಶಃ ತಪ್ಪದೆ ಉಚ್ಚರಿಸಲು ಸಮರ್ಥಳಾಗಿದ್ದಳು. ಪಿಕ್ಲಿಂಗ್ ಸಾಹೇಬರು ಹಂಚಿದ್ದ ಯೋಹಾನನ ಸುವಾರ್ತೆ—ಲೂಕನ ಸುವಾರ್ತೆ—ಮಾರ್ಕನ ಸುವಾರ್ತೆಗಳನ್ನು ಸುಂದರನಿಂದ ಓದಿಸಿ ಕೇಳಿ "ಮಹಾರಾಯ" ಎಂದು ಯೇಸೂಸ್ವಾಮಿಯನ್ನು ವಂದಿಸಿಯೂ ಇದ್ದಳು. ಆದರಿಂದು ಪಾದ್ರಿ ಹೇಳಿದ "ಬಡವರೇ ನೀವು ಬನ್ನಿ" ಎನ್ನುವ ನುಡಿ ರಾಮಕ್ಕನ ಹೃದಯದ ಮೇಲೆ ತುಂಬ ಪರಿಣಾಮವನ್ನುಂಟುಮಾಡಿತ್ತು. ತನ್ನಲ್ಲಿ ತಾನು "ರಾಮ, ಕೃಷ್ಣ, ಶಿವ, ಗಣೇಶರಿಗೆ ಒಂದೇ ಸಮನೆ ಈ ಒಂಬತ್ತು ವರ್ಷ ಹರಕೆಹೊತ್ತು, ರಟ್ಟೆಯಲ್ಲಿ ಕಸುವಿರುವತನಕ ದುಡಿದೆ. ಬಲಗುಂದಲು ಈ ಹಾಳುಮೂಳುಗಳನ್ನು ಮಾರಿ ಬಂದದ್ದರಲ್ಲಿ ಮಕ್ಕಳ ಹೊಟ್ಟೆ ತುಂಬಲು ಯತ್ನಿಸಿದೆ. ಆದರೂ ಅವುಗಳ ಹೊಟ್ಟೆತುಂಬದು. ನಾಳೆ ನಾನು ಸತ್ತುಹೋದರೆ ಅವುಗಳ ಗತಿಯೇನು? ಅವುಗಳಿಗೆ ಒಂದು ಹಿಡಿ ಕೂಳು ಹಾಕುವವರು ಯಾರು?" ಎಂದು ಯೋಚಿಸುತ್ತಾ "ಬಡವರನ್ನು ಬಾರೆಂದು ಕರೆದಿರುವನು ಯೇಸೂಸ್ವಾಮಿ. ಅವನ

ಮರೆಹೊಕ್ಕರೆ ಏನು ಮಾಡುತ್ತಾನೋ ನೋಡೋಣ. ಕಣ್ಣಿಲ್ಲದವರಿಗೆ ಕಣ್ಣು ಕೊಟ್ಟವನವನು; ಪಾಪಿಗಳನ್ನು ಪುಣ್ಯವಂತರನ್ನಾಗಿಸಿದವನವನು; ರೋಗಿಗಳನ್ನು ನಿರೋಗಿಗಳನ್ನಾಗಿಸಿದವನವನು—ನನ್ನ ಕಂದಮ್ಮಗಳಿಗೆ ಎರಡು ತುತ್ತು ಅನ್ನ, ಹೊದೆಯಲು ಬೆಚ್ಚನೆಯ ಎರಡು ತುಂಡು ಬಟ್ಟೆಗಳನ್ನು ಕೊಡಲಾರನೇ ?" ಎಂದು ತರ್ಕಿಸಿಕೊಂಡು ಮಾರನೆಯ ದಿನ ಪಾದ್ರಿಯನ್ನು ಕೇಳಿಬಿಡುವುದೆಂದು ನಿಶ್ಚಯಿಸಿ ಮಲಗಿಕೊಂಡಳು. ಅಂದು ಮುಖದ ಮೇಲೆ ನಗೆ ಹರಿದು ಕಣ್ತುಂಬ ನಿದ್ರೆ ಹತ್ತಿತು. ರಾತ್ರಿ ರಾಮಕ್ಕನಿಗೆ ಏನೇನೋ ಕನಸು. ಸುಂದರಾ ಪಾದ್ರಿ ದೊರೆಸಾನಿಯಂತೆ ಲಂಗ ಹಾಕಿಕೊಂಡು, ಕಾಲಿಗೆ ಮೋಜಗಳನ್ನು ಮೆಟ್ಟಿಕೊಂಡು ದೇವಸ್ಥಾನಕ್ಕೆ ಹೋಗುತ್ತಿರುವಂತೆ, ಪುಟ್ಟು ಹ್ಯಾಟು, ಸೂಟುಗಳನ್ನು ಹಾಕಿಕೊಂಡು ದೊಡ್ಡ ಮೋಟಾರಿನಲ್ಲಿ ತಿರುಗಾಡುತ್ತಿದ್ದಂತೆ ಕನಸು. ಸುಖನಿದ್ರೆಯ ಜತೆಗೆ ಹಿತವಾದ ಕನಸು. ಬೆಳಗಾಗುತ್ತಲೇ ರಾಮಕ್ಕ ಎಂದಿನಂತೆ ಸೂರ್ಯದೇವನಿಗೆ ಕೈಮುಗಿಯುತ್ತಾ "ಕನಸು ನಿಜವಾಗಲಿ ದೊರೆಯೇ, ನಿನಗೆ ನೂರು ನಮಸ್ಕಾರಗಳನ್ನು ಹಾಕುತ್ತೇನೆ" ಎಂದು ಹರಸಿಕೊಂಡಳು. ರಾಮಕ್ಕನ ಸರಳ ಹೃದಯಕ್ಕೆ ಸೂರ್ಯ ಬೇರೆ, ಯೇಸು ಬೇರೆಯೆಂಬ ಭಾವನೆಯೇ ಹೊಳೆಯದು. ಸೂರ್ಯ ತನ್ನ ಮಕ್ಕಳ ಬಗ್ಗೆ ಯೇಸುವಿಗೆ ಶಿಫಾರಸು ಮಾಡುತ್ತಾನೆಂದು ಅವಳ ನಂಬಿಕೆ.

ಮಾರನೆಯ ದಿವಸ ಪೂಜ್ಯ ಪಿಕ್ಲಿಂಗ್ ಸಾಹೇಬರ ಉಪದೇಶ ಎಂದಿನಂತೆ ನಿರ್ಬಾಧಿತವಾಗಿ ಸಾಗಲಿಲ್ಲ. ಉಪದೇಶ ಮಾಡುತ್ತ ಮಾಡುತ್ತ ಮಾತಿನ ವೇಗದಲ್ಲಿ ಪಾದ್ರಿದೊರೆಗಳು ಹಿಂದೂ ದೇವರುಗಳ ಮೇಲೆ ಟೀಕೆಗಾರಂಭಿಸಿದರು. "ನಿಮ್ಮ ರಾಮನನ್ನು ನೋಡಿ ಎಂತಹ ಹೇಡಿ ಅವನು. ಮುದಿತಂದೆಯ ಚಾಪಲ್ಯವನ್ನು ತೀರಿಸಲು ಯತ್ನಿಸಿ ದೇಶವನ್ನು ಅನಾಯಕ ಮಾಡಿಹೋದ. ಒಲಿದುಬಂದ ಶೂರ್ಪನಖಿಯ ಕಿವಿಮೂಗುಗಳನ್ನು ಕೊಯ್ದು ಕಳುಹಿದ. ಅಣ್ಣತಮ್ಮಂದಿರ ಮನೆಯ ಮಾತಿಗೆ ಬಾಯಿಹಾಕಿ ವಾಲಿಯನ್ನು ಮೋಸದಿಂದ ಕೊಂದ. ವಿಭೀಷಣನಿಗೆ ದುರಾಶೆಯಿಟ್ಟು ಒಲಿಸಿಕೊಂಡು ಲಂಕೇಶ್ವರನ ಮನೆಯನ್ನು ಮುರಿದ. . . . ನಿಮ್ಮ ಕೃಷ್ಣನನ್ನು ನೋಡಿ. ಎಂತಹ ನಿಸ್ಸೀಮ. ಚೋರ, ಜಾರ......." ಮುಂದೆ ಉಪದೇಶ ಸಾಗಲಿಲ್ಲ. ಪ್ರಚಂಡ ವಾಗ್ಮಿಗಳೂ, ಪ್ರತಿವಾದಿ ಭಯಂಕರರೂ, ಉಭಯ ಭಾಷಾ ವಿಶಾರದರೂ. ತರ್ಕತೀರ್ಥರೂ,

ಆನಂದಗಿರಿ ಪೀಠದ ವೈದಿಕ ಅಧಿಕಾರಿಗಳೂ ಆದ ಗುಂಡಾಭಟ್ಟರು ವಿನೋದಕ್ಕೆ ಪಾದ್ರಿಯ ಉಪದೇಶವನ್ನು ಕೇಳುತ್ತ ನಿಂತಿದ್ದುದು ಪಿಕ್ಲಿಂಗ್ ಸಾಹೇಬರ ಕಣ್ಣಿಗೆ ಬಿದ್ದಿರಲಿಲ್ಲ; ಬಿದ್ದಿದ್ದರೆ ಸಾಹೇಬರು ಹಿಂದೂದೇವರುಗಳ ಗೊಡವೆಗೇ ಹೋಗುತ್ತಿರಲಿಲ್ಲ. ಪಾದ್ರಿಗೂ ಭಟ್ಟರಿಗೂ ಭಯಂಕರ ವಾದವೇ ಆರಂಭವಾಗಿ ಬಿಟ್ಟಿತು. ಪಾದ್ರಿ ತಕ್ಕಮಟ್ಟಿಗೆ ಹಿಂದೂಧರ್ಮದ ವಿಚಾರ ಇಂಗ್ಲೀಷು ಪುಸ್ತಕಗಳನ್ನೋದಿ ತಿಳಿದುಕೊಂಡಿದ್ದರೂ ಭಟ್ಟರೊಂದಿಗೆ ಸರಿಗಟ್ಟಿ ನಿಂತು ವಾದಮಾಡುವಷ್ಟು ಸಮರ್ಥನಾಗಿರಲಿಲ್ಲ. ಹಿಂದೂಧರ್ಮದ ವಿಚಾರ ಪಾದ್ರಿಗೆ ಎಷ್ಟು ಗೊತ್ತಿತ್ತು ಭಟ್ಟರಿಗೆ ಕ್ರಿಸ್ತಮತದ ವಿಚಾರ ಅಷ್ಟೂ ಗೊತ್ತಿರಲಿಲ್ಲ. "ಏಕೆ ಗೊತ್ತುಮಾಡಿಕೊಳ್ಳಬೇಕು. ಮ್ಲೇಚ್ಛರ ಮತ. ಅವರಿಗೆ ಮತವೆಂದರೇನು—ಎಲ್ಲಿಂದ ಬಂತು—ಹಿಂದುಗಳನ್ನು ಬಯ್ಯುವುದೇ ಅವರ ಮತ" ಎಂದೇ ಭಟ್ಟರ ವಾದ. ಹೀಗಾಗಿ ಶಾಸ್ತ್ರಿಗಳ ಸಂಸ್ಕೃತದ ಪಟಾಟೋಪ ಪಾದ್ರಿಗೆ ಅರ್ಥವಾಗುತ್ತಿರಲಿಲ್ಲ; ಪಾದ್ರಿಯ ಬೈಬಲ್ ಬೋಧೆ ಭಟ್ಟರಿಗೆ ಹಿಡಿಯುತ್ತಿರಲಿಲ್ಲ. ಸ್ವಲ್ಪಹೊತ್ತು ಕಾದಾಟ ಸಾಗಲು ಸುತ್ತಮುತ್ತಲಿದ್ದವರು ಇಬ್ಬರನ್ನೂ ಸಮಾಧಾನ ಮಾಡಲು, ಭಟ್ಟರು ಪಾದ್ರಿಗೆ ನಾಲ್ಕು ಬುದ್ಧಿವಾದದ ಮಾತುಗಳನ್ನು ಹೇಳಿ ಹೊರಡುವುದರಲ್ಲಿದ್ದರು. ಆ ಹೊತ್ತಿಗೆ ರಾಮಕ್ಕ ಮೆಲ್ಲನೆ ದಾರಿಮಾಡಿಕೊಂಡು ಪಾದ್ರಿಯ ಬಳಿ ಬರುತ್ತಿದ್ದುದನ್ನು ಕಂಡು, ಏನು ನಡೆಯುತ್ತದೆಯೋ ನೋಡೋಣವೆಂದು ಹಾಗೆಯೇ ನಿಂತರು. ರಾಮಕ್ಕ ಹಾಗೂ ಹೀಗೂ ಪಾದ್ರಿಯ ಬಳಿ ಬಂದು ನಿಂತಳು. ಮಾತನಾಡಲು ಹೆದರಿಕೆ. ಸುತ್ತಲೂ ನಿಂತಿದ್ದ ಜನರ ಗುಂಪನ್ನು ನೋಡಿ ಅವಳ ಅಲ್ಪಸ್ವಲ್ಪ ಧೈರ್ಯವೂ ಉಡುಗಿಹೋಗಿತ್ತು. ಪಾದ್ರಿಯು ಮೃದು ಮಾತಿನಲ್ಲಿ

"ಏನು ರಾಮಕ್ಕ ಬಂದೆ—ಹೇಳು. ಧೈರ್ಯವಾಗಿ ಹೇಳು. ಯೇಸುಸ್ವಾಮಿಯ ಬಳಿ ಭಯವೇತಕ್ಕೆ?" ಎಂದು ಶುದ್ಧ ಕನ್ನಡದಲ್ಲಿ ತಡೆತಡೆದು ನುಡಿದ.

"ದೊರೆಗಳೇ—ಮೊನ್ನೆ....ಯೇಸೂಸ್ವಾಮಿ 'ಬಡವರನ್ನೂ ಬನ್ನಿ' ಎಂದು ಕರೆಯುತ್ತಾನೆಂದು ಹೇಳಿದಿರಿ. ಅದು ನಿಜವೇ."

"ರಾಮಕ್ಕ. ಯೇಸುವಿನಲ್ಲಿ ಸಂಶಯಪಡಬಾರದು. ಅವನು ನುಡಿದಂತೆ ಮಾಡುವವನು. ಅವನದು ಬಹಳ ದೊಡ್ಡ ಹೃದಯ. ಅದರಲ್ಲಿ ಎಲ್ಲ

ರನ್ನೂ ಅಡಗಿಸಿಕೊಂಡು ಕಾಪಾಡುತ್ತಾನೆ.....ನೀನು ಯೇಸುವಿನ ಬಳಿಗೆ ಬರಲು ಬಯಸುವಿಯೇನು ?"

ರಾಮಕ್ಕ ನಿರುತ್ತರಳಾಗಿ ತಲೆಯಲ್ಲಾಡಿಸಿದಳು. ಪಾದ್ರಿ ಅವಳ ಕಿವಿಯಲ್ಲೇನೋ ಉಸುರಿ ತನ್ನ ಸಹಾಯಕ ಪಾದ್ರಿಗಳೊಂದಿಗೆ ಹೊರಟುಹೋದ.

ಈ ಸೋಜಿಗವನ್ನು ನೋಡಿ ಭಟ್ಟರು ಅವಾಕ್ಕಾಗಿಹೋದರು. ಯೇಸುವಿನ ಕರೆ—ರಾಮಕ್ಕನ ಬರವು ಇವುಗಳೊಂದೂ ಅವರಿಗೆ ಅರ್ಥವಾಗಲಿಲ್ಲ. ರಾಮಕ್ಕ ಏತಕ್ಕಾಗಿ ಪಾದ್ರಿಯನ್ನು ಆಶ್ರಯಿಸುತ್ತಿರುವುದು; ಅವನು ಹೋಗುವಾಗ ಅವಳ ಕಿವಿಯಲ್ಲುಸುರಿಹೋದದ್ದೇನು? ಎಂದು ಯೋಚಿಸುತ್ತಾ, ರಾಮಕ್ಕನ ಅಂಗಡಿಯ ಬಳಿ ಬಂದು ನಿಂತು ಮೆಲ್ಲನೆ ಆಕೆಯ ಕ್ಷೇಮ ಸಮಾಚಾರವನ್ನು ವಿಚಾರಿಸಲಾರಂಭಿಸಿದರು. ಪಾದ್ರಿಯ ಅಭಯದ ವಿಚಾರ ಪರಂಪರೆಯಲ್ಲಿ ಸಿಕ್ಕುಬಿದ್ದಿದ್ದ ರಾಮಕ್ಕನಿಗೆ ಭಟ್ಟರ ಬರುವೇ ಗೊತ್ತಾಗಲಿಲ್ಲ. ಮೆಲ್ಲನೆ ಕಣ್ದೆರೆದು ತನ್ನ ಎದುರಿಗೆ ನಿಂತಿದ್ದ ಆರು ಅಡಿಯ ಭವ್ಯಮೂರುತಿಯನ್ನು ಮೂರು ಬಾರಿ ತಲೆಯಿಂದ ಕಾಲಿನವರೆಗೂ ಎವೆಯಿಕ್ಕದೆ ನೋಡಿದಳು. ಮೇಲಕ್ಕೆ ಎತ್ತಿ ಕಟ್ಟಿದ ಶಿಖಿ, ಪಟ್ಟೆಪಟ್ಟೆಯಾಗಿ ಬಳಿದುಕೊಂಡಿದ್ದ ವಿಭೂತಿಯ ರೇಖಾವಿನ್ಯಾಸ, ಹೊದೆದಿದ್ದ ಜರೀಶಾಲು, ಕೊರಳಲ್ಲಿದ್ದ ರುದ್ರಾಕ್ಷಿಮಾಲೆ, ಶೀಡಿ ಕಚ್ಚೆಹಾಕಿ ಉಟ್ಟಿದ್ದ ಕಿಕ್ಕೇರಿಮಗ್ಗದ ರೇಷ್ಮೆಯಂಚಿನ ಪಂಚೆ, ಇವೆಲ್ಲಕ್ಕೂ ಕಳಸವಿಟ್ಟಂತೆ ಖಣಿಖಣಿಲೆಂದು ಕಂಚಿನಂತೆ ಶಬ್ದ ಮಾಡುತ್ತಾ ಭಟ್ಟರು ನಡೆಯಿತೆಂದರೆ ಅವರ ಹೆಜ್ಜೆಯೊಂದಿಗೆ ಕುಣಿಯುತ್ತಿದ್ದ ಗುಂಡು ಹೊಟ್ಟೆ, ಇವುಗಳನ್ನು ನೋಡಿ "ಇವರಿಗೇನು ನನ್ನ ಹತ್ತಿರ ಕೆಲಸ" ಎಂದು ಅಂದುಕೊಂಡಳು. ರಾಮಕ್ಕನ ಸ್ತಬ್ಧತೆಯನ್ನು ಕಂಡು ಭಟ್ಟರೇ ಮೊದಲು ಮಾಡಿದರು.

"ಏನು ಮುದುಕಮ್ಮಾ. ಈ ವಯಸ್ಸಿನಲ್ಲೂ ದುಡಿಯೋಕೆ ಕೈಯ್ಯಲ್ಲಾಗತ್ತೆಯೇ?"

"ಆಗದಿದ್ದರೆ ಏನು ಮಾಡಬೇಕಪ್ಪಾ. ಹೊಟ್ಟೆ ಒಟ್ಟೆ ಸಾಗಬೇಕಲ್ಲಾ. ಜತೆಗೆ ಎರಡು ಮಕ್ಕಳು ಬೇರೆ ಇವೆ."

"ಎರಡು ಮಕ್ಕಳು ಬೇರೆ ಇವೆಯೋ. ಕಷ್ಟಕಷ್ಟ. ಹಾಗಾದರೆ ಜೀವನಕ್ಕೆ ಏನು ಮಾಡುತ್ತೀ!"

"ಹೀಗೆ ಚೂರುಪಾರು ತಿಂಡೀ ಮಾಡಿಕೊಂಡು ಬಂದು ಮಾರು ತ್ತೇನೆ. ದಿನಕ್ಕೆ ಮೂರು ನಾಲ್ಕಾಣೆ ಲಾಭ ಸಿಕ್ಕತ್ತೆ. ಅದರಲ್ಲಿ ಹೊಟ್ಟೆ ಹೊರೆಯುತ್ತೇವೆ."

"ಅದು ಸರಿ ಮುದುಕಮ್ಮ. ನಿನಗೆ ಮಕ್ಕಳಿದಾರೆ ಎಂದೆಯಲ್ಲಾ ಅವರು ಏತಕ್ಕೆ ದುಡಿದುಹಾಕಬಾರದು."

"ಅವರಿನ್ನೂ ಚಿಕ್ಕವರಪ್ಪಾ. ನಮ್ಮ ಸುಂದರೂಗೆ ಈಗ ತಾನೆ ಹತ್ತು ತುಂಬಿದೆ. ಪುಟ್ಟೂ ಅವಳಿಗಿಂತ ನಾಲ್ಕು ವರ್ಷಕ್ಕೆ ಚಿಕ್ಕವನು."

"ಓಹೋ! ಸರಿ ಹಾಗಾದರೆ. ಅದಕ್ಕೇ ಪಾದ್ರಿ ಜೊತೆ ಅಷ್ಟೊಂದು ಗುಟ್ಟಾಗಿ ಮಾತುಕತೆ ಆಡುತ್ತಿದ್ದದು. ಜಾತೀಗೀತಿ ಬಿಡೋ ಏರ್ಪಾಟೇನೂ ಇಲ್ಲವಲ್ಲಾ."

"ಜಾತಿ—ಜಾತಿ—ಜಾತಿ ನನಗೇನಪ್ಪಾ ಮಾಡಿತು. ರೋಗರುಜಿನ ಬಂದು ಕಾಲು ಚಾಚಿ ಮಲಗಿಕೊಂಡರೆ ಯಾವ ಜಾತಿ ಸಹಾಯಕ್ಕೆ ಬಂತು. ಮೊನ್ನೆ ಇಫ್ಲೂಯಂಜಾ ಬಂದು ಮಲಗಿದೆ. ನಮ್ಮ ಹಿಂದೂ ಜನಾ ಯಾರೂ ಬರಲಿಲ್ಲ ಸಹಾಯಕ್ಕೆ. ಒಬ್ಬ ಪಾದ್ರಿ ದೊರೆಸಾನಿ ಬಂದು ಗಂಜೀ ಹಾಕಿ, ಔಷಧ ಕೊಟ್ಟು, ಮಕ್ಕಳಿಗೆ ಅನ್ನ ತಂದುಕೊಟ್ಟು ಕಾಪಾಡಿದಳು. ಯಾವ ಜಾತಿ ಅನ್ನಾ ಕೊಡುತ್ತೋ ಅದನ್ನೇ ನನ್ನ ಜಾತಿ ಮಾಡಿಕೋತೀನಿ."

ಭಟ್ಟರಿಗೆ ಬಾಯಲ್ಲಿ ಮಾತು ನಿಂತುಹೋಯಿತು. ಎದುರಿಗಿದ್ದದ್ದು ವಾದದಲ್ಲಿ, ಪಾಂಡಿತ್ಯದಲ್ಲಿ ಸೋಲುವ ಪ್ರತಿವಾದಿಯಲ್ಲ. ನೊಂದ, ಬೆಂದ ಅನುಭವಿ. ಭಟ್ಟರು ರಾಮಕ್ಕನನ್ನು ಸೋಲಿಸಲು ಬೇರೆ ಉಪಾಯಗಾಣದೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಲು ನಿಶ್ಚಯಮಾಡಿದರು.

"ಹಾಗಾದರೆ ನೀನು ಜಾತಿಕೆಟ್ಟು ಕಿರಿಸ್ತಾನರೋಳು ಆಗಿಹೋಗು ತ್ತೀಯೇನು ? "

"ಯಾಕಾಗಬಾರದು."

"ಆಗಬಹುದು. ಆದರೆ ಹಿಂದೂದೇವರುಗಳು ಅಂತಹವರನ್ನು ಏನು ಮಾಡುತ್ತಾರೆಂದು ಕಾಣೆ. ಕಾಳಿಯೊಬ್ಬಳೇ ಸಾಲದೆ. ಆ ತೆರದ ನಾಲಗೆಯ, ರುಂಡಮಾಲೆಧರಿಸಿದ, ಉರಿಗಣ್ಣಿನ ರುದ್ರಮೂರುತಿಯನ್ನು ನೋಡಿದ್ದೀಯೋ ಇಲ್ಲವೋ ? ಅವಳು ಕ್ರಿಸ್ತನಂತಹ ಎಷ್ಟೋಮಂದಿ ಮ್ಲೇಚ್ಛರನ್ನು ಒಂದೇ

ಸಲಕ್ಕೆ ಆಹುತಿ ತೆಗೆದುಕೊಂಡಿದ್ದಾಳೆ....ನೀನೇನೋ ಮುದುಕಿ, ಹೇಗಾದರೂ ನಾಳೆ ಸಾಯುವವಳು. ಆದರೆ ಮಕ್ಕಳ ವಿಚಾರ ಆಲೋಚಿಸು. ನಾಳೆ ಅವರ ಗತಿಯೇನು ? ”

ಭಟ್ಟರ ಬ್ರಹ್ಮಾಸ್ತ್ರ ತನ್ನ ಪ್ರಭಾವವನ್ನು ತೋಡಲಾರಂಭಿಸಿತು. ರಾಮಕ್ಕನ ಕಣ್ಣುಗಳಲ್ಲಿ ನೀರೂರಿತು. ಈ ದೇವರುಗಳ ವ್ಯಾಜ್ಯದಲ್ಲಿ ಮನುಷ್ಯರಿಗೆ ಉಳಿಗಾಲವಿಲ್ಲವೇ ? ಎಂದು ಚಿಂತಿಸಿದಳು. ಭಟ್ಟರನ್ನು ಆರ್ತದೃಷ್ಟಿಯಿಂದ ನೋಡುತ್ತಾ

“ ಹಾಗಾದರೆ ಏನು ಮಾಡಲಿ.”

“ ನಿನ್ನ ಮನಸ್ಸು ಬಂದ ಹಾಗೆ ಮಾಡು, ಆದರೆ ಯಾವದನ್ನೂ ದುಡುಕಬೇಡ. ಜಾತಿಯಲ್ಲೇ ಉಳಿದುಕೊಂಡು ಮಕ್ಕಳನ್ನು ಮುಂದಕ್ಕೆ ತರುವ ಮಾರ್ಗವನ್ನು ಆಲೋಚಿಸು. ನಾನೂ ಕೈಯ್ಯಲ್ಲಾದ ಸಹಾಯವನ್ನು ಮಾಡುತ್ತೇನೆ. ಅದು ಸರಿ. ನಿನ್ನ ಮಗಳಿಗೆ ವಯಸ್ಸು ಎಷ್ಟು ಅಂದೆ.”

“ ಹತ್ತು ತುಂಬಿತು.”

“ ಸರಿಸರಿ ! ಮನೆ ಎಲ್ಲಿ ಮಾಡಿದ್ದೀ ರಾಮಕ್ಕ.”

“ ಬಸವನಗುಡಿ ಮೂಲೆಯಲ್ಲಿ ; ಟಾಟಾ ಸಿಲ್ಕು ಕಾರ್ಖಾನೆಯ ಒಂದು ಪಕ್ಕಕ್ಕೆ. ಮನೆಯಲ್ಲ ಬುದ್ಧಿ—ಒಂದು ಹಳೇ ಗುಡಿಸಲು.”

“ ನಾನೇ ಬರುತ್ತೇನೆ ನಾಳೆ. ನಿನಗೆ ಏನಾದರೂ ವ್ಯವಸ್ಥೆ ಮಾಡುತ್ತೇನೆ.”

ಈ ಭರವಸೆ ರಾಮಕ್ಕನ ಹೃದಯವನ್ನು ಆನಂದದಿಂದ ಬಿರಿಯಿಸಿತು. ಇಷ್ಟು ಬೇಗ ಇಷ್ಟು ಸುಲಭವಾಗಿ ಒಬ್ಬ ಅನಾಥಬಂಧು ತನಗೆ ದೊರೆಯುತ್ತಾನೆಂದು ಅವಳು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ. ಕೃತಜ್ಞತೆಯಿಂದ ಭಟ್ಟರ ಕಾಲುಗಳ ಮೇಲೆ ಉರುಳಿದಳು. ಮುದುಕಿಯ ಸರಳತೆ, ಮಗುವಿನಂತಹ ನಿಷ್ಕಾಪಟ್ಯ ಭಟ್ಟರನ್ನೂ ಒಂದರೆಕ್ಷಣ ಅಲುಗಿಸತು. ಆದರೆ ಆ ಭವ್ಯ ಮೂರುತಿ ಇಂತಹ ಸಣ್ಣ ಅಲುಗು ಉಲುಗುಗಳಿಗೆ ಜಗ್ಗುವ ಜೀವಿಯಲ್ಲ. ರಾಮಕ್ಕ ಭಟ್ಟರು ಹೋದ ದಾರಿಯನ್ನೇ ನೋಡುವಳು. ಟಾರು ಬಳಿದ ಆ ಕಪ್ಪು ಹಾದಿಯ ಮೇಲೆ ಇಂದು ಸ್ವರ್ಣವೇಶ್ಮ ಹೊದೆಸಿದ್ದಂತೆ ರಾಮಕ್ಕನಿಗೆ ಭಾಸವಾಯಿತು. ಎದುರಿಗೆ ಸುಂದರವಾದ ಭವನ—ಅದರ ಮುಂದುಗಡೆ

ಮನೋಹರವಾದ ಬುಗ್ಗೆಯಿಂದ ಶೋಭಾಯಗೊಂಡಿದ್ದ ಉಪವನ. ಅದರಲ್ಲಿ ಹಕ್ಕಿಪಕ್ಕಿಗಳ ಮೃದುಗೀತೆಗಳೊಂದಿಗೆ ದನಿಗೂಡಿಸಿದ ಹಸುಮಕ್ಕಳ ಆಟದ ಕೇಕೆ. ಎತ್ತ ನೋಡಿದರೂ ಪ್ರಕೃತಿಯ ಲೀಲಾಜಾಲ. ಈ ಕನಸು ರಾಮಕ್ಕನ ಜಳ್ಳುದೇಹಕ್ಕೆ ಹೊಸಶಕ್ತಿಯನ್ನಿತ್ತಿತ್ತು. ಮುಖ ನಗೆಯಿಂದ ಮಿಂಚಿತು. ತನ್ನ ಮಕ್ಕಳ ಭವಿಷ್ಯ ಸುಖದ ಈ ಕನಸು ಅವಳಿಗೆ ನನಸಾಗಿಯೇ ಕಂಡು ಬಂತು. "ಎಂತಹ ಸೌಭಾಗ್ಯ! ಎಂತಹ ಸೌಭಾಗ್ಯ!!" ಎಂದು ಜಪಿಸಿ ಕೊಂಡು ಅಲ್ಲಿಂದೆದ್ದಳು, ಆಗಲೇ ಸೂರ್ಯ ಗೃಹಾಭಿಮುಖನಾಗಿದ್ದ. ರಾಮಕ್ಕನ ಹೃದಯದಲ್ಲಿ ಸಂಚರಿಸಲಾರಂಭಿಸಿದ್ದ ಹೊಸ ಬಿಸಿರಕ್ತದ ವರ್ಣವೋ, ಸೂರ್ಯ ತನ್ನ ಮನೆಗೆ ಕೆಂಪು ಮುಲ್ಲಂಗಿಯಯನ್ನು ಕೊಂಡೊಯ್ಯುತ್ತಿದ್ದನೋ ಅಂತೂ ಅಂಬರವೆಲ್ಲಾ ರಕ್ತವರ್ಣ ಮಂಡಿತವಾಗಿ ಚಿನ್ನದ ಚೌಕಟ್ಟಿನಲ್ಲಿ ನಿಂತು, ಆಗ—ಈಗ ತೆಳು ನೀಲಿಯನ್ನು ಆಕರ್ಷಿಸಲೆತ್ನಿಸುತ್ತಾ, ಉತ್ತಮ ಪ್ರಕೃತಿಚಿತ್ರಕಾರನ ಕೃತಿಯನ್ನು ನಾಚಿಸಲು ಹುರುಡಿನಿಂದ ಹೊರಟಿತ್ತು.

೨

ಆಟ ಒಳ್ಳೆಯ ಹುರುಪಿನಿಂದ ಸಾಗಿತ್ತು. ಚಂದ್ರ, ಭಟ್ಟರು ಒಂದು ಕಡೆ. ಗಣೇಶರಾಯರೂ, ಶಂಕರಪ್ಪ ಒಂದು ಕಡೆ. ಎರಡೂ ಒಳ್ಳೆಯ ಘಟಾನುಘಟಿ ಜತೆ.

"ಇಗೊಳ್ಳಿ, ನಿಮ್ಮ ಜತೆಗೆ ಬಂತು ಕರ್ಮ—ಒಂಭತ್ತು."

"ನನ್ನ ಜತೆ ಹಾಗಿರಲಿ, ನಿನ್ನ ಜತೆ ಗತಿನೋಡು—ಹತ್ತು—ಹೋಯ್ತು. ನಾನು ಹೇಳಲಿಲ್ಲವೇ?"

"ಹೋಗಲಿ ಬಿಡಿ. ನಮ್ಮ ಭಟ್ಟರು ನೋಡಿಕೊಳ್ಳುತ್ತಾರೆ ನಿಮ್ಮನ್ನು. ಇನ್ನೇನು ಹಣ್ಣಾಗುವ ಕಾಯಿ, ಅದನ್ನು ಹಾಳುಮಾಡಿದಿರಲ್ಲಾ."

ಗಣೇಶರಾಯರ ಆಟದ ಗತಿಯೇನೋ ಭಟ್ಟರ ಕೈಯಲ್ಲೇ ಇತ್ತು. ಆದರವರಿಗೆ ಬೀಳಬೇಕಾಗಿದ್ದುದು ಒಂದು ದುಗ, ಅದರ ಬದಲು ಗ್ರಹಚಾರದ ಏಳು ಒಂದು ಬಿದ್ದು ಆಟವನ್ನೆಲ್ಲಾ ಕೆಡಿಸಿಬಿಟ್ಟಿತು. ಶಂಕರಪ್ಪನ ಕೈಗೆ ದಾಳ ಸಿಕ್ಕಿತು. ಚಂದ್ರನ ಉಳಿದಿದ್ದ ಒಂದು ಕಾಯಿಯೂ ಮನೆಗೆ ಹೋಯಿತು. ಮತ್ತೆ ನಾಲ್ಕನ್ನೂ ಹೂಡಿ ಆಟಕ್ಕೆ ಕುಳಿತಳು. ಆದರೆ ಮೊದಲಿನ ಉತ್ಸಾಹ ಅವಳಲ್ಲಿ ಭಂಗ ಹೊಂದಿತ್ತು.

"ಇವತ್ತೇನೋ ಆಟ ನನ್ನ ಕೈ ಹತ್ತಲಿಲ್ಲ ನೋಡಿ ರಾಯರೇ."

"ಹೌದು ಹೌದು, ದಿನಾಗಲೂ ನಮ್ಮ ಆಟ ಕೆಡಿಸುವಾಗ ಹೇಗಿರುತ್ತಿತ್ತು."

"ಬಿಡಿ ಏನು ದೊಡ್ಡಮಾತು- (ನಿಮ್ಮ ಆಟ ಕೆಡಿಸೋದಿಕ್ಕೇ ನಾವು ಹುಟ್ಟಿರುವುದು.")

ಎಂದು ನಗುತ್ತಾ ಹಾಸನ್ನು ತೆಗೆದುಬಿಟ್ಟಳು. ಭಟ್ಟರಿಗೇನೋ ಮೋರೆ ಕೆಂಪಾಗಲಿಲ್ಲ. ಅವರ ಆಟ ಅಂದು ಅಷ್ಟು ಕೆಟ್ಟಿಲ್ಲದಿದ್ದರೂ ಒಳ್ಳೆಯ ಸ್ಥಿತಿಯಲ್ಲಿರಲಿಲ್ಲ. ಆದರೆ ಗಣೇಶರಾಯರ ದಾಳಕ್ಕೆ ಶುಕ್ರದೆಸೆ ಬಂದಿತ್ತು. ರಾಯರು ಕುಪಿತರಾದ್ದನ್ನು ಕಂಡು ಚಂದ್ರ ಮೆಲ್ಲನೆ ಪಕ್ಕಕ್ಕೆ ತೆರಳಿ ಉಪ್ಪು ಕಾಗದದಂತಹ ಅವರ ಮೋರೆಯ ಮೇಲೆ ಮೃದುವಾಗಿ ಕೈಯಾಡಿಸುತ್ತಾ

"ಕೋಪ ಬಂತೇನು, ಆಟ ಸಾಗಲಿಲ್ಲಾಂತ. ನೀವೇ ಗೆದ್ದೋರು ಅಂತಾ ಒಪ್ಪಿಕೊಳ್ಳುತ್ತೇನಲ್ಲಾ, ಇನ್ನ್ಯಾತಕ್ಕೆ ಕೋಪ."

ಎಂದು ತಾನೂ ಸ್ವಲ್ಪ ಹುಸಿ ಮುನಿಸನ್ನು ತೋರಲು ರಾಯರ ಕೋಪ ತಾಪಗಳು ಕರಗಿ ನೀರಾಗಿ ಚಂದ್ರನ ಕಟಾಕ್ಷ ಮಹಾಸಾಗರದಲ್ಲಿ ಮಿಳನ ಹೊಂದಿಬಿಟ್ಟವು. ಈ ಮೂವ್ವರ ಗೊಂದಲದಲ್ಲಿ ಸಾಮಾನ್ಯವಾಗಿ ಶಂಕರಪ್ಪನನ್ನು ಯಾರೂ ಗಮನಿಸುತ್ತಲೇ ಇರಲಿಲ್ಲ. ಶಂಕರಪ್ಪನವರೆಂದರೆ ಗಣೇಶರಾಯರ ಒಂದು ಅಂಶವೆಂದೇ ಎಲ್ಲರ ಕಲ್ಪನೆ. ಗಣೇಶರಾಯರಿಗೆ ಕೋಪ ಬಂದಿದೆಯೆಂದರಿಯಬೇಕಾದರೆ ಶಂಕರಪ್ಪನ ಮುಖ ನೋಡಿದರೆ ಸಾಕು; ಗಣೇಶರಾಯರ ಸಂತೋಷದ ವ್ಯಕ್ತಭಾವವನ್ನು ಕಾಣಬೇಕಾದರೆ ಶಂಕರಪ್ಪನ ಮುದಸ್ಮಿತವನ್ನು ಗಮನಿಸಿದರೆ ಸಾಕು!! ಗಣೇಶರಾಯರಿಗೆ ನಾಲ್ಕಾರು ಲಕ್ಷ ರೂಪಾಯಿಗಳ ಪಿತ್ರಾರ್ಜಿತ ಆಸ್ತಿಯಿತ್ತು. ಶಂಕರಪ್ಪನಂತಹ ಹತ್ತು ಮಂದಿ ಹೊಟ್ಟೆಗಿಲ್ಲದ ಬಿ.ಎ.ಎಲ್.ಎಲ್.ಬಿ., ಗಳನ್ನು ಅವರು ಸಾಕಿಕೊಳ್ಳಬಹುದಾಗಿತ್ತು. ಆದರೆ ಶಂಕರಪ್ಪನ ನಮ್ರತೆ, ಸ್ನೇಹಪರತೆಯನ್ನು ನೋಡಿ ಅವನಲ್ಲಿಯೇ ತೃಪ್ತಿಪಟ್ಟುಕೊಂಡಿದ್ದನು. ತಮಗೂ ವಯಸ್ಸು ಮೀರಿತ್ತು, ಇನ್ನು ಚಂದ್ರಮ್ಮನಿಗೆ ವಯಸ್ಸು ಮೀರುವುದರಲ್ಲಿತ್ತು. ಆದ್ದರಿಂದ ಅವಳಲ್ಲಿಯೇ ಮನಸ್ಸನ್ನು ನೆಟ್ಟು ಭೃಂಗವೃತ್ತಿಗೆ ನಮಸ್ಕಾರಹಾಕಿಬಿಟ್ಟಿದ್ದರು. ರಾಯರ ಮದುವೆಯಲ್ಲಿ ಚಂದ್ರನದೇ ನರ್ತನವಾಯಿತಂತೆ. ಆಗಿನಿಂದಲೂ

ಆಕೆಯಲ್ಲಿ ಪತ್ನೀಪ್ರೇಮವನ್ನು ಪೋಷಿಸಿಕೊಂಡು ಬಂದಿದ್ದರು. ಚಂದ್ರಮ್ಮ ತನ್ನ ಉತ್ತರ ವಯಸ್ಸಿನಲ್ಲಿಯೂ ಈ ವಯೋವೃದ್ಧ, ಅನುಭವಸ್ಥ, ಅನುಕೂಲಸ್ಥ ರಸಿಕರನ್ನು ಆಕರ್ಷಿಸಲು ಬೇರೆ ಕಾರಣಗಳೂ ಇದ್ದವು. ರಾಯರ ಕಣ್ಣು ಮೆಚ್ಚಿದ ಹೆಣ್ಣುಗಳು ಯಾವ ಮಾಯೆಯಿಂದಲೋ ಚಂದ್ರಮ್ಮನ ಮನೆಯಲ್ಲೇ ರಾಯರಿಗೆ ಸ್ವಾಗತ ಬಯಸುತ್ತಿದ್ದವು. ಜೊತೆಗೆ ಚಂದ್ರಮ್ಮನ ಗಾಯನ—ನರ್ತನ ಕೌಶಲ್ಯಗಳೂ ರಾಯರ ಚಿತ್ತವನ್ನು ಸೆಳೆದಿದ್ದುವು. ಎಷ್ಟೋ ಬಾರಿ ಚಂದ್ರನ ಕೈಯಿಂದ ವೀಳ್ಯವನ್ನು ಮೆಲ್ಲುತ್ತಾ ಅವಳ ತೊಡೆಯ ಮೇಲೆ ಮಲಗಿ "ಮಾತಾಡಬಾರದೇನೋ ಮಾರಮಣನೇ" ಜಾವಡಿಯನ್ನು ಕೇಳಿ ಹಿಗ್ಗಿಹೋಗಿದ್ದರು. ಆವರೀಗ ವಯಸ್ಸಿನ ಹೊಡೆತದಿಂದ "ಶಾರೀರ ಸಂಪತ್ತಿ" ಕುಗ್ಗಿದುದರಿಂದ ತನ್ನ ಸ್ಥಾನಕ್ಕೆ ಯೋಗ್ಯಳಾದ ಯಾವಳಾದರೂ ಸುಂದರಿಗೆ ಶಿಕ್ಷಣವಿತ್ತು ನಿಯಮಿಸಬೇಕೆಂದು ಚಂದ್ರಮ್ಮ ಭಾವಿಸಿಕೊಂಡಿದ್ದುದನ್ನೇ ರಾಯರೂ ಭಟ್ಟರೂ ಅನುಮೋದಿಸಿಯೂ ಇದ್ದರು.

ಭಟ್ಟರು ಚತುಶ್ಶಾಸ್ತ್ರಪಾರಂಗತರು ಹೇಗೋ ಹಾಗೆ ಕಾಮಕಲೆಯಲ್ಲಿಯೂ ಪ್ರವೀಣರೆಂದರೆ ತಪ್ಪಾಗದು. ಅವರ ದೃಷ್ಟಿಯಲ್ಲಿ ವೇದಕ್ಕಿಂತಲೂ ವಾತ್ಸ್ಯಾಯನನ ಕಾಮಸೂತ್ರಕ್ಕೇ ಬೆಲೆ ಹೆಚ್ಚು. ಲೋಕ ಭಟ್ಟರ ದೃಷ್ಟಿಪಥವನ್ನು ಒಪ್ಪಿಕೊಳ್ಳದಿದ್ದುದರಿಂದ ಅದನ್ನು "ಮೂಢಪ್ರಪಂಚ" ವೆಂದು ಕರೆಯಲು ಅವರೇನೂ ಹಿಂದು ಮುಂದು ನೋಡಿರಲಿಲ್ಲ. ಭಟ್ಟರ ಮನೆತನ ಬಹಳ ಪುರಾತನವಾದದ್ದಂತೆ. ಭಟ್ಟರ ತೀರ್ಥರೂಪರಾದ ಪಂಡಿತ ರಾಮಾ ಶಾಸ್ತ್ರಿಗಳನ್ನು ಮೈಸೂರಿಗೆ ಮೈಸೂರೇ ಹೊಗಳುತ್ತಿತ್ತು. ಅವರ ನೇಮ ನಿಯಮ, ಶುಚಿರುಚಿ, ವೇದಾಧ್ಯಯನ, ಪ್ರಮಾಣಿಕತೆ ಮನೆ ಮಾತುಗಳಾಗಿದ್ದವು. ಭಟ್ಟರೇ ಒಮ್ಮೊಮ್ಮೆ ವಿನೋದ ಪ್ರಸಂಗ ಬಂದಾಗ "ನಾನು ಮಾಡುವ ಪಾಪಗಳಿಗೂ ನಮ್ಮಪ್ಪನೇ ಪ್ರಾಯಶ್ಚಿತ್ತ ಅನುಭವಿಸಿ ಹೋಗಿದ್ದಾನೆ ಬಿಡಿ. ಇನ್ನು ನಾನು ನಿರಾತಂಕವಾಗಿ ಸುಖಪಡಬಹುದು" ಎಂದು ಹೇಳುತ್ತಿದ್ದರು. ಭಟ್ಟರಿಗೂ ಅವರ ತಂದೆಗೂ ವ್ಯಾಜ್ಯ ಬಂದು ಭಟ್ಟರು ಮನೇಬಿಟ್ಟು ಕಾಶೀರಾಮೇಶ್ವರ ಪ್ರಾಂತ್ಯ ಹೋಗಿ ಅಲ್ಲಿ ವಿದ್ಯಾರ್ಜನೆ ಮಾಡಿಕೊಂಡು ಮರಳಿ ಊರಿಗೆ ಬಂದರಂತೆ. ಆಗಿನಿಂದಲೂ ಇವರನ್ನು ಕಂಡರೆ ಎಲ್ಲರಿಗೂ ಗೌರವ, ಎಲ್ಲರನ್ನು ಕಂಡರೆ ಅವರಿಗೂ ಗೌರವ. ಈ ಖ್ಯಾತಿ

ಆನಂದಗಿರಿ ಪೀಠದ ವರೆಗೆ ಹಬ್ಬಿ ಭಟ್ಟರನ್ನು ವೈದಿಕ ಅಧಿಕಾರಿಗಳನ್ನಾಗಿ ನಿಯಮಿಸಿಕೊಂಡು ಸನ್ಮಾನಿಸಿದ್ದರು. ಈ ಅಧಿಕಾರ ನಿರ್ವಹಣದ ಒಂದು ಸಂದರ್ಭದಲ್ಲಿಯೇ ಭಟ್ಟರು ತಮ್ಮ ಶಿಷ್ಯಕೋಟಿಯ ಒಬ್ಬರ ಮನೆ ಮದುವೆಯಲ್ಲಿ ಚಂದ್ರನ ನಾಟ್ಯವನ್ನು ನೋಡಿ, ಅವಳನ್ನು ಮೋಹಿಸಿ ತಮ್ಮ ಶಿಷ್ಯವೃತ್ತಿಯನ್ನು ಅವಳಿಗೆ ಅನುಗ್ರಹಿಸಿದ್ದರು.

ಆಡದ ಚರಿತ್ರೆ ಮುಗಿಯಲು ರಾಯರು ಒಂದೆರಡು ಸಿಗರೇಟು ಎಳೆದು, ನಾಲ್ಕಾರು ಕಪ್ಪು ಕಾಫಿಯನ್ನು ಹೀರಿ ತಮ್ಮ ಮಿತ್ರ ಶಂಕರಪ್ಪನೊಂದಿಗೆ ಹೊರಟೇ ಹೋದರು. ಭಟ್ಟರು ರಾಯರ ಲೌಕಿಕ ಜ್ಞಾನವನ್ನು ಅಂದು ಮೆಚ್ಚಿದಷ್ಟು ಎಂದೂ ಮೆಚ್ಚಿರಲಿಲ್ಲ. ಈಚೀಚೆಗೆ ರಾಯರ ಧಾರಾಳದಲ್ಲಿ ತುಸ ಲೋಭ, ಭಟ್ಟರ ಲೋಭದಲ್ಲಿ ತುಸ ಧಾರಾಳ ಮೂಡಿದ್ದುದರಿಂದ ಚಂದ್ರನ ಚಂದ್ರಬಿಂಬ ಭಟ್ಟರ ಮುಖದ ಮೇಲೆಯೇ ಹೆಚ್ಚು ಬೀಳಲು ಆರಂಭಿಸಿತ್ತು.

ಭಟ್ಟರು ಕಾಲುಚಾಚಿ ಮಲಗಿಕೊಂಡು "ವೆಂಕಟಾ" ಎಂದು ಕೂಗಿದರು. ವೆಂಕಟ ಮಾತನಾಡದೆ ಬಂದು ಭಟ್ಟರ ಕಾಲು ಒತ್ತುತ್ತಾ ಕುಳಿತ. ವೆಂಕಟಮುನಿಯಪ್ಪನೇ ಚಂದ್ರಸಾನಿಯ ಪಕ್ಕವಾದ್ಯದ ಮೃದಂಗ ವಾದ್ಯಗಾರ. ತಾಫೆಗಳಲ್ಲಿಯೂ ಕಚೇರಿಗಳಲ್ಲಿಯೂ ಆಕೆಗೆ ಮೃದಂಗ ಬಾರಿಸುವುದಲ್ಲದೆ, ಮನೆಗೆ ಬಂದು ಹೋಗುವ ಭಟ್ಟರಂತಹ ಸನ್ಮಾನ್ಯ ಅತಿಥಿಗಳ ಸೇವೆ, ಸತ್ಕಾರ ಮಾಡುವ ಪುಣ್ಯವೂ ಅವನಿಗೆ ದೊರಕಿತ್ತು. ಒಮ್ಮೊಮ್ಮೆ ಭಟ್ಟರು ದಿನಗಟ್ಟಳೆ ಚಂದ್ರನ ಮನೆಯಲ್ಲಿ ನಿಂತರೆ ಅವರ ನೆತ್ತಿಗೆ ಸಂಭೀರು ಎಣ್ಣೆ ಇಳಿಸಿ, ಮೈತಿಕ್ಕಿ ಅಭ್ಯಂಜನ ಸ್ನಾನ ಮಾಡಿಸುವುದೂ ಅವನ ಪಾಲಿಗೇ ಬೀಳುತ್ತಿತ್ತು. ವೆಂಕಟಮುನೀಗೂ ಆಗಾಗ್ಗೆ ಪುಡಿಕಾಸುಗಳು, ಶೇಷೆಯ ಅಮೃತ ದೊರಕುತ್ತಿತ್ತು. ತೃಪ್ತಿಯ ಬೆಲೆಯನ್ನವನು ಚೆನ್ನಾಗಿ ಅರಿತವನಾದ್ದರಿಂದ ಹೆಚ್ಚಿನ ಲಾಭಕ್ಕೆ ಆಸೆಪಡುತ್ತಿರಲಿಲ್ಲ. ಭಟ್ಟರಿಗೆ ಕಾಲೊತ್ತಿಸಿಕೊಂಡದ್ದು ಸಾಕಾಗಿ ತಾಯೂರು ಉಂಡೇನಶ್ಯವನ್ನು ವೆಂಕಟನ ಕೈಲಿ ಚೆನ್ನಾಗಿ ತಿಕ್ಕಿಸಿ ಭರಣಿಗೆ ತುಂಬಿಕೊಂಡು, ಒಂದೆರಡು ಚಿಟಿಕೆ ಮೂಗಿಗೇರಿಸಿ ಅವನನ್ನು ಆಚೆ ಅಟ್ಟಿಬಿಟ್ಟರು.

ಚಂದ್ರ ಬಾಗುತ್ತ, ಬಳಕುತ್ತ ಬಂದು ಭಟ್ಟರ ಪಕ್ಕದಲ್ಲಿ ಕುಳಿತಳು. ವಯಸ್ಸು ಮೀರಿದ್ದರೂ ಅವಳಲ್ಲಿ ಗತವೈಭವದ ಲಾವಣ್ಯದ ಕುರುಹು

ಇನ್ನೂ ಅಲ್ಪಸ್ವಲ್ಪ ಉಳಿದುಕೊಂಡಿದ್ದವು. ಚಂದ್ರಮ್ಮ ಸ್ವಭಾವತಃ ರೂಪವಂತೆ. ಭಟ್ಟರು ಚಂದ್ರನನ್ನೇ ನೋಡುತ್ತಾ,

"ಚಂದ್ರಾ, ನಿನಗೊಂದು ಬಟ್ಟಲು ನನಗೊಂದು ಬಟ್ಟಲು ಅಮೃತ ಈಗ ಸಿಕ್ಕಿ ನೀನೂ ನಾನೂ ಮೊದಲಿನಂತೆ ವಯಸ್ಸಿನಲ್ಲಿ ಚಿಕ್ಕವರಾದರೆ...."

"ಆದರೆ....ಏನು ?"

"ಏನೇ! ಹುಚ್ಚೀ, ಕಾಣೆಯಾ! ನಾವಿಬ್ಬರೂ ಸುಖವಾಗಿರಬಹುದು."

"ಈಗೇನು ಸುಖವಾಗಿರದೆ ಕಷ್ಟಪಡುತ್ತಿರುವುದು ?"

"ಈಗಿನ ಸುಖಕ್ಕೂ ಆಗಿನ ಸುಖಕ್ಕೂ ವ್ಯತ್ಯಾಸವಿಲ್ಲವೇ ?"

"ನಿಮಗೆಲ್ಲೋ ಹುಚ್ಚು ! ಏನೇನೋ ಭ್ರಮೆಪಡುತ್ತೀರಿ."

ಎಂದು ಭಟ್ಟರ ಕೆನ್ನೆಯ ಮೇಲೆ ಮೃದುವಾಗಿ ಒಂದು ಪೆಟ್ಟನ್ನಿತ್ತಳು. ಭಟ್ಟರಿಗೆ ಅದರಲ್ಲಿಯೂ ಸ್ವರ್ಗ ಸುಖವೇ ಕಂಡು ಬಂತು. ಚಂದ್ರನ ಬಳಿ ಇದ್ದುಬಿಡುವುದೆಂದರೆ ಭಟ್ಟರು ಜಗತ್ತನ್ನೇ ಮರೆತುಬಿಡುವರು. ಭಟ್ಟರ ಬಗೆ ಅವರ ಎಳಸುತನ ಒಮ್ಮೊಮ್ಮೆ ಚಂದ್ರಮ್ಮನನ್ನು ನಾಚಿಸುತ್ತಿತ್ತು. ಯಾರಿದ್ದಾರೆಂದು ನೋಡದೆ ಕಂಡ ಕಂಡೆಡೆಯಲ್ಲಿ ತನ್ನನ್ನು ಅಪ್ಪಿ ಚುಂಬಿಸಲು ಯತ್ನಿಸುತ್ತಿದ್ದ ಭಟ್ಟರ ಹುಚ್ಚನ್ನು ನೋಡಿ ಒಮ್ಮೊಮ್ಮೆ ರೇಗುವಳು. ಆದರೆ ಅವರ ಸಹಾಯುವನ್ನು ನೆನೆದು ಅಂತಹ ಬಲಿಷ್ಠರ ವಿರೋಧ ಕಟ್ಟಿಕೊಳ್ಳಬಾರದೆಂದು ಎಲ್ಲವನ್ನೂ ಸಹಿಸುವಳು.

ಚಂದ್ರ ಭಟ್ಟರ ಶೃಂಗಾರ ಚೇಷ್ಟೆಗಳಿಗೆ ಅರ್ಧ ಅರ್ಧ ಒಲಿಯುತ್ತಾ ಮೆಲ್ಲನೆ ಮಾತು ತೆಗೆದಳು.

"ನಾನು ಹೇಳಿದ್ದು ಮರೆತೇ ಬಿಟ್ಟಿರಿ."

"ಯಾವದು ಹೇಳು ?"

"ನೋಡಿದಿರಾ—ಮರೆತೇ ಬಿಟ್ಟಿರಿ ಎಂದು ನಾನು ವಿನೋದಕ್ಕೆ ಅಂದದ್ದು ನಿಜವೇ ಆಯಿತು."

"ಅಲ್ಲಾ ಕಣೇ ಚಂದ್ರಾ. ನೀನು ಯಾವಯಾವದೋ ಹೇಳಿರುತ್ತೀ. ಅದರಲ್ಲಿ ಈಗ ಪ್ರಸ್ತಾಪಿಸುತ್ತಿರುವುದು ಯಾವದು ಹೇಳು."

"ದತ್ತಕ ತೆಗೆದುಕೊಳ್ಳೋ ವಿಚಾರ...."

"ನಾನೂ ಭೂಮಿ ಅಂತರಿಕ್ಷ ಎಲ್ಲಾ ಶೋಧಿಸುತ್ತಾ ಇದ್ದೇನೆ.

ಸರಿಯಾದ್ದು ಸಿಕ್ಕಬೇಕಲ್ಲಾ. ಹಾ, ಮರೆತಿದ್ದೆ....ಇನ್ನೊಂದು ವಿಷಯ ನೋಡು.

"ಏನು ವಿಷ!"

"ಬೆಳಿಗ್ಗೆ ಅಕಸ್ಮಾತ್ತಾಗಿ ಒಬ್ಬ ಪಾದ್ರಿ ಜತೆ ಹೊಡೆದಾಡಬೇಕಾಯಿತು. ಆಗ ಅವನ ಹತ್ತಿರ ಒಬ್ಬ ಮುದುಕಿ ಮಾತನಾಡುತ್ತಿದ್ದಳು. ನಾನು ವಿಚಾರಿಸುವುದರಲ್ಲಿ ಅವಳಿಗೆ ಹತ್ತು ಹನ್ನೊಂದು ವರ್ಷದ ಒಂದು ಹೆಣ್ಣಿದೆ ಎಂದು ಗೊತ್ತಾಯಿತು. ಹಾಗೂ ಹೀಗೂ ಕಿರಿಸ್ತಾನರ ಜಾತಿ ಸೇರಿಸೋದು ತಪ್ಪೂಂತ ಆ ಮುದುಕಿಗೆ ಉಪದೇಶಮಾಡಿದೆ. ನೋಡಬೇಕು ಮುದುಕಿ ಏನು ಮಾಡುತ್ತಾಳೋ?"

"ಹುಡುಗೀನ ನೋಡಿದಿರಾ ಹೇಗಿದೆ."

"ಇಲ್ಲಾ. ನಾಳೆ ನೀನೂ ಬಾ. ಇಬ್ಬರೂ ಹೋಗಿ ನೋಡೋಣ. ಅವಳ ಮನೇಯಿರೋ ಜಾಗ ವಿಚಾರಿಸಿಕೊಂಡಿದ್ದೀನಿ. ಹುಡುಗಿ ಸಿಕ್ಕಿದರೆ ಎಲ್ಲಾ ಅನುಕೂಲ ನೋಡು. ಬೆಳೆದ ಹೆಣ್ಣು, ಬೇಗ ಸಿದ್ಧವಾಗುತ್ತೆ. ನಿಂಗೂ ಮುಂದೆ ಯೋಚನೆಯಿರೋದಿಲ್ಲ."

"ನನಗೆ ವಂಶ ನಿಲ್ಲಕೂಡದು ನೋಡಿ. ಅದೇ ಮುಖ್ಯ ಆಸೆ ನನ್ನ ಹೊಟ್ಟೇಲಿ ಹುಟ್ಟಿದ್ದೇ ಆದರೆ ಚೆನ್ನಾಗಿರುತ್ತಿತ್ತು. ವಿಧಿಯಿಲ್ಲ. ಏನು ಮಾಡೋದು. ನಾನು ಕಲಿತ ಭರತವಿದ್ಯಾ ನಷ್ಟವಾಗಬಾರದು. ಎಲ್ಲಾದರೂ ಸದ್ವಿನಿಯೋಗವಾದರೆ ಸರಿ. ದತ್ತು ತೆಗೆದುಕೊಳ್ಳುವುದನ್ನೇ ನನ್ನ ಮಗಳು ಎಂದು ಭಾವಿಸಿಕೊಳ್ಳುವುದು ಅಷ್ಟೇ!"

"ನೀನು ಸುಮ್ಮನೆ ವ್ಯಸನಪಡಬಾರದು ನೋಡು ಚಂದ್ರಾ, ಮಕ್ಕಳಾಗಬೇಕೂ ಅಂದರೆ ಹೇಗಾಗುತ್ತದೆಯೇ."

"ಸಾಕು ಸುಮ್ಮನಿರಿ, ಏನು ನಾಚಿಕೆಗೆಟ್ಟು ಮಾತನಾಡುತ್ತೀರಿ ನೀವೆಲ್ಲಾ ಇಷ್ಟು ಜನವಿದ್ದೂ...."

"ನಾವೆಲ್ಲಾ ಇಷ್ಟು ಜನ ಇರೋ ಹೊತ್ತಿಗೇ ಚಂದ್ರಾ..."

ಇಬ್ಬರೂ ಕಿಲಕಿಲನೆ ನಕ್ಕರು. ತನ್ನ ಆಸೆ ಈಡೇರುವುದರಲ್ಲಿದೆಯಲ್ಲಾ ಎಂದು ಚಂದ್ರಮ್ಮನ ಮನಸ್ಸಿನಲ್ಲಿ ಹಿಡಿಯಲಾರದಷ್ಟು ಸಂತೋಷ. ಚಂದ್ರಮ್ಮ ಸಂತೋಷಪಟ್ಟಳಲ್ಲಾ ಎಂದು ಭಟ್ಟರಿಗೂ ಹಿಗ್ಗು.

ಪಿಕ್ಲಿಂಗ್ ಪಾದ್ರಿಗಳೆಂದರೆ ಕ್ರೈಸ್ತ ಜನಾಂಗಕ್ಕೇ ತುಂಬ ಗೌರವ. ಅವರು ಯಾವ ಊರಿನಲ್ಲಿ ಹುಟ್ಟಿದರೋ ಯಾವ ಊರಿನಲ್ಲಿ ಬೆಳೆದರೋ ಬೆಂಗಳೂರನ್ನು ತಮ್ಮ ತಾಯ್ನಾಡನ್ನಾಗಿ ಮಾಡಿಕೊಂಡಿದ್ದರು. ಮೂವತ್ತು ವರ್ಷಗಳಿಂದ ಒಂದೇಸಮನೆ ದುಡಿದು ಕ್ರೈಸ್ತರ ದೇವಾಲಯ, ಆಸ್ಪತ್ರೆ, ಶಾಲೆಗಳನ್ನು ಕಟ್ಟಿಸಿ ಕ್ರೈಸ್ತೇತರರ ಕೃತಜ್ಞತೆಗೂ ಪಾತ್ರರಾಗಿದ್ದರು. ಕೆಂಪನೆಯ ದುಂಡು ಮುಖ. ನಸುನೀಳವಾದ ಗಡ್ಡ, ಮಿನಮಿನ ಮಿಂಚುವ ನೀಲಿ ಕಣ್ಣುಗಳು, ಎದೆಯ ಮೇಲೆ ಕ್ರಿಸ್ತದೇವನ ಬೆಳ್ಳಿಯ "ಶಿಲುಬೆ ಚಿತ್ರ." ಸಾಧಾರಣವಾದ ಪರಂಗಿಯವರ ಉಡುಪು. ವ್ಯಾಕರಣಶುದ್ಧವಾಗಿ ಬಿಡಿಸಿಬಿಡಿಸಿ ಮಾತನಾಡುತ್ತಿದ್ದ ಅವರ ಬಗೆ ಎಲ್ಲರನ್ನೂ ಅವರೆಡೆಗೆ ಸೆಳೆಯುತ್ತಿದ್ದವು. ಪಿಕ್ಲಿಂಗ್ ಪಾದ್ರಿಗಳ ಪಾರಮಾರ್ಥಿಕ ಜ್ಞಾನವನ್ನು ಕ್ರೈಸ್ತ ಪಂಡಿತರು ಅಷ್ಟು ಹೊಗಳದಿದ್ದರೂ, ದೀನ ಜನದ ಬಗ್ಗೆ ಅವರು ತೋರುತ್ತಿದ್ದ ನಿರ್ವ್ಯಾಜ ಅಂತಃಕರಣ ಎಲ್ಲರೂ ಅವರನ್ನು ಕೊಂಡಾಡುವಂತೆ ಮಾಡಿತ್ತು. ಅವರ 'ಮತಾಂತರ' ಕಾರ್ಯವನ್ನು ಒಪ್ಪದಿದ್ದವರೂ ಕೂಡ ಅವರ ಆಸ್ಪತ್ರೆಯನ್ನು ಮೆಚ್ಚುತ್ತಿದ್ದರು.

ಪಿಕ್ಲಿಂಗ್ ಪಾದ್ರಿಗಳು ಸೇವಾಜೀವನಕ್ಕೆ ಮನಸ್ಸುಗೊಟ್ಟು ಸ್ವಸುಖವನ್ನು ಸಂಪೂರ್ಣವಾಗಿ ಮರೆತೇ ಬಿಟ್ಟಿದ್ದರು. ವಿವಾಹದ ಬಂಧನಕ್ಕೆ ಒಳಗಾಗದೆ ಗೃಹಕೃತ್ಯದ ಗೊಂದಲಕ್ಕೆ ಬೀಳದೆ, ತಾವು ಮತಾಂತರಗೊಳಿಸಿದ ಆದಿದ್ರಾವಿಡ, ಆದಿಕರ್ಣಾಟಕ ಜನರನ್ನೇ ಮಕ್ಕಳೆಂದು ಭಾವಿಸಿಕೊಂಡು ಸುಖವಾಗಿದ್ದರು. ಚಾಮರಾಜಪೇಟೆಯ ಒಂದು ಕೊನೆಯಲ್ಲೇ ಅವರಮನೆ. ಮನೆಯ ಮುಂದೆ ಸದಾ ಪುಷ್ಪಭರಿತವಾಗಿ ಸಣ್ಣ ಪುಟ್ಟಗಿಡಗಳಿಂದ ಕೂಡಿದ ಪುಟ್ಟದಾದ ಕೈದೋಟ. ಓರಣವಾಗಿ ಇಟ್ಟಿದ್ದ ಕೆಲವು ಕುರ್ಚಿ ಮೇಜುಗಳು. ತೊಟ್ಟಿಯಲ್ಲಿ ಬಾಗಿಲೆದುರಿಗೆ ಸರಿಯಾಗಿ "ಕೊನೆಯ ಧ್ಯಾನ ನಿರತನಾದ ಯೇಸುಸ್ವಾಮಿಯ" ಮುದ್ದಾದ ತೈಲಚಿತ್ರ. ತೊಟ್ಟಿಯ ಬಲಗಡೆ ಪಾದ್ರಿಯವರು ವ್ಯಾಸಂಗಮಾಡುತ್ತಿದ್ದ ಕೋಣೆ ಮತ್ತು ಅವರ ಪುಸ್ತಕ ಭಂಡಾರಗಳಿದ್ದವು.

ಆಳು ಬಂದು ಪಾದ್ರಿಯವರಿಗೆ "ಯಾರೋ ಬಂದಿದ್ದಾರೆಂದು" ಸೂಚಿಸಿದಾಗ ಅವರು ಅಕೆಂಪಿಸನ "ಇಮಿಟೇಷನ್ ಆಫ್ ಕ್ರೈಸ್ಟ" ಗ್ರಂಥ

ದಲ್ಲಿ ಲೀನವಾಗಿ ಹೋಗಿದ್ದರು. ಆಳು ಎರಡು ಮೂರು ಬಾರಿ ಎಚ್ಚರಿಸಿದ ಮೇಲೆ ಪಾದ್ರಿಗಳು ಓದುತ್ತಿದ್ದ ಪುಟದ ಮಧ್ಯೆ ಬೆರಳಿಟ್ಟು ಗ್ರಂಥವನ್ನು ಮುಚ್ಚಿ ಕನ್ನಡಕವನ್ನು ಮೂಗಿನ ಮೇಲೆ ಎಳೆದುಕೊಂಡು

"ಯಾರು ಬಂದಿರುವವರು ?"

"ಯಾವಳೋ ಒಬ್ಬ ಮುದುಕಿ. ಇಲ್ಲಿಗೆ ಬರಲು ತಮ್ಮ ಅಪ್ಪಣೆಯಾಗಿತ್ತಂತೆ"

"ನಡಿ—ನೋಡುವ"

ಎಂದು ಹೊರಗೆ ಬಂದು ಮನೆಯ ಅಂದಚೆಂದವನ್ನು ಮೆಚ್ಚುತ್ತಾ ಬೆರಗಾಗಿ ನಿಂತಿದ್ದ ರಾಮಕ್ಕನನ್ನು ಕಂಡು ಆಶ್ಚರ್ಯಚಕಿತರಾದರು. ರಾಮಕ್ಕ ದೈನ್ಯದಿಂದ ಕೈಮುಗಿಯಲು ಪಾದ್ರಿಯವರು ಆಕೆಯ ಎರಡು ಕೈಗಳನ್ನು ಹಿಡಿದು ಒಳಗೆ ಕರೆತಂದು ಕುಳ್ಳಿರಿಸಿ

"ಏನು ರಾಮಕ್ಕ, ಇಷ್ಟುದೂರ ಬಂದು ಬಿಟ್ಟೆ."

"ತಮ್ಮ ಅಪ್ಪಣೆಯಾಗಿತ್ತಲ್ಲಾ."

"ಹೌದು ಹೌದು! ಆದರೆ ನೀನು ಬರುವುದಿಲ್ಲಾ ಎಂದುಕೊಂಡಿದ್ದೆ ನಾನು. ಬಹಳ ಸಂತೋಷ. ಚಹಾ ತೆಗೆದುಕೊಳ್ಳುವಿಯೇನು ?"

ರಾಮಕ್ಕ ಬೇಡಬೇಡವೆನ್ನುತ್ತಿದ್ದರೂ ಚಹಾ ಬಂದೇ ಬಂತು. ಚಹವನ್ನು ಮುಟ್ಟದಿದ್ದರೂ ನಾಲ್ಕು ಬಿಸ್ಕತ್ತುಗಳನ್ನು ಸೆರಗಿನ ತುದಿಯಲ್ಲಿ, ಮಕ್ಕಳಿಗಾಗುತ್ತದೆಂದು ಕಟ್ಟಿಕೊಂಡಳು. ಪಾದ್ರಿಯವರು ತುಸುತುಸವೇ ಚಹಾ ಕುಡಿಯುತ್ತ

"ಏನು ನಿಶ್ಚಯ ಮಾಡಿದೆ ರಾಮಕ್ಕಾ ?

"ನಾನೇನೂ ಮಾಡಿಲ್ಲ ಗುರುವೇ. ನನಗೊಂದೂ ದಾರಿ ತೋಚದ ಹಾಗಾಗಿದೆ."

"ಎಲ್ಲರಿಗೂ ಮೊಟ್ಟಮೊದಲು ಹಾಗೆಯೇ ಆಗುವುದು. ಆದರೆ ಯೇಸುಸ್ವಾಮಿಯನ್ನು ನಂಬಿದರೆ ಅವನು ಸರಿಯಾದ ದಾರಿ ತೋರಿಸುವನು"

"ಯೇಸುಸ್ವಾಮಿಯ ಬಳಿ ಹೋಗಬೇಕಾದರೆ ನಮ್ಮ ಜಾತಿಯನ್ನು ಬಿಡಲೇಬೇಕೇನು ?"

"ಹೌದು ಅದು ಅಗತ್ಯ. ಯೇಸುಸ್ವಾಮಿ ಜಗದ್ಗುರು. ಎಲ್ಲರ

ಕಲ್ಯಾಣಕ್ಕಾಗಿ ಅವನು ಸ್ವರ್ಗದಿಂದ ಬಂದ ದೇವದೂತ. ಮಿಕ್ಕ ಜಾತಿ, ಮತ, ಧರ್ಮಗಳು ಸೈತಾನನಿಂದ ಪ್ರೇರಿತವಾದವು. ನಿನಗೆ ದೇವರ ಧರ್ಮ ಬೇಕೋ—ಸೈತಾನನ ಮತ ಬೇಕೋ ? "

" ದೇವರ ಧರ್ಮವೇ ಬೇಕು. ಆದರೆ ನಮ್ಮ ಧರ್ಮವು ದೇವರ ದೆಂದೇ ನಮ್ಮ ಭಟ್ಟರು ಹೇಳುತ್ತಾರೆ. "

" ಅದು ಸುಳ್ಳು....ನಿಮ್ಮ ಭಟ್ಟರ ಮೋಸ. "

" ನಿಮ್ಮ ಧರ್ಮಕ್ಕೆ ನಾನು ಬಂದರೆ ನಮ್ಮ ದೇವರಗಳು ಕೋಪ ಮಾಡಿಕೊಂಡು ಕಾಡಿದರೆ ಏನು ಮಾಡಲಿ. ಈಗಿರುವ ಶನಿಕಾಟವೇ ಸಾಕಾಗಿದೆ. ಇನ್ನು ಮಿಕ್ಕ ಗ್ರಹಗಳು ಬೆನ್ನು ಹತ್ತಿದರೆ ನನ್ನ ಗತಿಯೇನು ? "

ಯೇಸು ರಕ್ಷಿಸುವನು. ಯೇಸುವಿನ ಮುಂದೆ ಎಲ್ಲ ಗ್ರಹಗಳೂ ಹೆದರಿ ಓಡುವವು. ಅವನ ಶಕ್ತಿಯ ಮುಂದೆ ಅವೆಲ್ಲವೂ ತೃಣಸಮಾನ. "

" ಹಾಗಾದರೆ ಸರಿ. "

" ನೀನು ಎಲ್ಲ ಯೋಚನೆಯನ್ನೂ ಬಿಟ್ಟು ಯೇಸುವಿನ ಮರೆಹೋಗು. ನಿನ್ನ ಮತ್ತು ನಿನ್ನ ಮಕ್ಕಳಗತಿ ನೇರವಾಗುವುದು. ಬಡತನ ನೀಗುವುದು. ಕಷ್ಟಕೊನೆಗಾಣುವುದು. "

" ಇನ್ನೊಂದು ಸಂಗತಿ ದೊರೆಗಳೇ.... "

" ಹೇಳು—ಯಾವದಕ್ಕೂ ಹೆದರಬೇಡ. ಯಾವದನ್ನೂ ಮರೆ ಮಾಚಬೇಡ. "

" ನಮ್ಮ ಜಾತಿಯಲ್ಲೇ ಇದ್ದು ಮಕ್ಕಳ ಯೋಗಕ್ಷೇಮ ನೆಟ್ಟಗಾಗುವ ಹಾಗೆ ನಮ್ಮ ಭಟ್ಟರು ಮಾಡುತ್ತಾರಂತೆ.... "

" ಯಾರು ಆ ಭಟ್ಟರು. "

" ಅಂದು ನಿಮ್ಮೊಂದಿಗೆ ವಾದಕ್ಕೆ ನಿಂತಿದ್ರರಲ್ಲಾ ಅವರು.... "

" ಓಹೋ ! ಅವರೋ !! ಸರಿ ಹಾಗಾದರೆ !! ಹಾಗೆಯೇ ಮಾಡು. ನ್ಯಾಯವಾದ ದಾರಿ ಬಿಡಬೇಡ. ಯೇಸುಸ್ವಾಮಿ ಬಳಿಗೆ ಎಲ್ಲರೂ ಒಂದಲ್ಲ ಒಂದು ದಿವಸ ಬರುವಿರಿ. ಬನ್ನಿಬನ್ನಿರೆಂದು ನಾನು ಬಲವಂತ ಮಾಡುವುದಿಲ್ಲ. ನಿನ್ನ ಮನಸ್ಸು ಒಪ್ಪಿದಾಗ ಬಾ. ಯೇಸುಸ್ವಾಮಿಯ ದೊಡ್ಡ ಹೃದಯದಲ್ಲಿ ನಿನಗೆ ಸ್ಥಳ ಯಾವಾಗಲೂ ಇರುವುದು. ವಿಚಾರ

ಮಾಡು. ಯಾವದನ್ನೂ ದುಡುಕಬೇಡ. ಮಕ್ಕಳ ಮುಂದಿನ ಗತಿಯನ್ನು ಚೆನ್ನಾಗಿ ಯೋಚಿಸು."

ಎಂದು ಹೇಳುತ್ತಿರುವಂತೆಯೇ ಸೇವಕನು ಒಂದು 'ಭೇಟಿಯ ಚೀಟಿ' (Visiting Card)ಯನ್ನು ತಂದೀಯಲು ಪಾದ್ರಿಗಳು ಅದನ್ನು ಓದಿಕೊಂಡು

"ಇನ್ನು ನನಗೆ ಹೊತ್ತಾಯಿತು. ರಾ॥ ರಿಕೆಟ್ಟರೂ ನಾನೂ ದೇವಾಲಯಕ್ಕೆ ಹೋಗಬೇಕಾಗಿದೆ. ಸಂಜೆಗೆ ಮೇರಿಯಮ್ಮನ ಜನ್ಮೋತ್ಸವವಿದೆ. ನೀನೂ ಮಕ್ಕಳೂ ಅಲ್ಲಿಗೆ ಬನ್ನಿ."

ಎಂದು ಸೇವಕನನ್ನು ಕರೆದು ಒಂದು ಗಾಡಿಮಾಡಿ ಮುದುಕಿಯನ್ನು ಮನೆಸೇರಿಸಿ ಬರುವಂತೆ ಆಜ್ಞೆಮಾಡಿ ರಿಕೆಟ್ಟರನ್ನು ಕಾಣಲು ಹೊರಟು ಹೋದರು. ಸ್ವಲ್ಪ ಕಾಲಾನಂತರ ಸೇವಕ ತಂದ ಗಾಡಿಯಲ್ಲಿ ರಾಮಕ್ಕ ಮನೆ ಸೇರಿದಳು.

ಮನೆಯ ಹಜಾರದಲ್ಲಿ ಒಂದು ಹರಕು ಚಾಪೆಯ ಮೇಲೆ ಸುಂದರೂ ಜತೆಗೆ ಭಟ್ಟರು ಒಬ್ಬ ಪೂರ್ವತರುಣಿ ಮಾತನಾಡುತ್ತ ಕುಳಿತಿರುವುದನ್ನು ಕಂಡು ರಾಮಕ್ಕನು ಆಶ್ಚರ್ಯಚಕಿತಳಾದಳು. ರಾಮಕ್ಕನನ್ನು ಕಂಡೊಡನೆಯೇ ಭಟ್ಟರು

"ಏನು ರಾಮಕ್ಕಾ, ಎಲ್ಲಿಗೆ ಹೊರಟುಬಿಟ್ಟಿದ್ದೆ. ಕಾದೂಕಾದೂ ಸಾಕಾಯಿತು. ಸುಂದರೂ ಇರುವ ಹೊತ್ತಿಗೆ ಸ್ವಲ್ಪ ಬೇಸರ ಪರಿಹಾರವಾದ ಹಾಗಾಯಿತು."

"ಹೀಗೇ ಹೋಗಿದ್ದೆ" ಎಂದು ಭಟ್ಟರ ಎದುರಿಗೆ ಒಂದು ಕಡೆ ಗೋಡೆಯೊರಗಿಕೊಂಡು ಕುಳಿತು

"ನಮ್ಮಂತಹ ಬಡವರ ಮನೆಗೆ ಭಾಗ್ಯಲಕ್ಷ್ಮಿ ಬಂದಹಾಗೆ ಬಂದಿದ್ದೀರಿ. ನಿಮಗೆ ಕೊಡೋಕೆ ಏನೂ ಇಲ್ಲವಲ್ಲಾ. ನಾವು ಮುಟ್ಟಿದ್ದು ನೀವು ತಿನ್ನೋದಿಲ್ಲವೇನೋ?"

"ಏನೂ ಬೇಡ ಬಿಡು ರಾಮಕ್ಕಾ, ನಿನ್ನ ವಿಶ್ವಾಸವೊಂದಿರಲಿ."

"ಇವರು ಯಾರು ಗೊತ್ತೇ ಆಗಲಿಲ್ವಲ್ಲಾ?"

"ಇವರೇ—ಇವರು.........ನಿನ್ನೆ ಹೇಳಿದೆನಲ್ಲಾ ನಿನ್ನ ಮಕ್ಕಳನ್ನು

ಒಬ್ಬರು ದತ್ತೂ ತೆಗೆದುಕೊಳ್ಳಬೇಕೆಂದಿದ್ದಾರೆಂದು...ಅವರೇ ಇವರು. ಇವರ ಹೆಸರು ಚಂದ್ರಮ್ಮ ಎಂದು."

"ಸಂತೋಷ. ಬನ್ನೀ ತಾಯಿ. ಬಡವರ ಮನೆ....ಬೇಜಾರು ಪಟ್ಟು ಕೊಳ್ಳಬೇಡಿ."

"ಉಪಚಾರವಿರಲಿ. ಮಕ್ಕಳ ವಿಚಾರ ಏನು ಮಾಡಿದೆ ರಾಮಕ್ಕಾ, ಪಾದ್ರೀನ ತಿರುಗಿ ಏನಾದರೂ ಕಂಡಿದ್ದೆಯೋ?

"ಈಗ ಪಾದ್ರಿಗಳ ಮನೆಯಿಂದಲೇ ಬರುತ್ತಾ ಇದ್ದೇನೆ ಭಟ್ಟರೇ."

"ಹಾಗಾದರೆ ಎಲ್ಲಾ ವ್ಯವಸ್ಥೆ ಮಾಡಿಕೊಂಡು ಬಂದೆ."

"ಇಲ್ಲಇಲ್ಲ. ಜಾತಿಕೆಡೋದು ನನ್ನ ಮನಸ್ಸಿಗೆ ಅಷ್ಟು ಬರಲಿಲ್ಲ. ಇನ್ನೊಂದು ಸಲ ನಿಮ್ಮನ್ನು ಕೇಳಿ ನಿಶ್ಚಯಿಸೋಣ ಎಂದು ಏನೂ ಹೇಳದೆ ಸುಮ್ಮನೆ ಬಂದೆ."

"ಹಾಗೋ ಸರಿ. ಒಳ್ಳೆಯ ಕೆಲಸವೇ ಮಾಡಿದೆ ಬಿಡು. ನಾನೂ ಚಂದ್ರಾ ಇಷ್ಟುಹೊತ್ತೂ ಸುಂದರೂ ಕೂಡ ಮಾತನಾಡುತ್ತಾ ಇದ್ದೆವು. ಹುಡುಗಿ ಒಳ್ಳೇ ಚಾಲೂಕು. ಅದು ಸರಿ ...ನೀನು ಇವರ ಸಾಕುತಾಯಿ ಯಂತಲ್ಲಾ...."

"ಹೌದು ಭಟ್ಟರೇ ಅದೊಂದು ದೊಡ್ಡಕಥೆ. ಸುಂದರೂ, ನೋಡು ಪುಟ್ಟು ಎಲ್ಲೀಗೆ ಹೋದ!"

ಎಂದು ಸುಂದರು ಆ ಕಥೆಯನ್ನು ಕೇಳಬಾರದೆಂದು ಆಚೆಗೆ ಕಳುಹಿಸಿ

"ಅದೃಷ್ಟದ ಮೇಲೆ ಯಾರ ಆಟವೂ ನಡೆಯುವ ಹಾಗಿಲ್ಲ. ಅಲ್ಲವೇ ಭಟ್ಟರೇ. ನಾನು ಯಾರೋ, ಈ ಮಕ್ಕಳು ಯಾರೋ ನನ್ನ ಕೊರಳಿಗೆ ಇವು ಬೀಳುವುದೆಂದಮೇಲೆ ಇದು ಅದೃಷ್ಟವಲ್ಲದೆ ಮತ್ತೇನು?"

"ಅದು ಹೇಗಾಯಿತು ರಾಮಕ್ಕಾ' ಎಲ್ಲಾ ವಿಶದವಾಗಿ ಹೇಳು."

"ನಾನು ಒಕ್ಕಲು ಮಕ್ಕಳ ಜಾತಿಯವಳು ಸ್ವಾಮೀ. ಈ ಮಕ್ಕಳು ಬ್ರಾಹ್ಮಣರ ಜಾತಿಯವು. ನಮ್ಮ ಸುಂದರೂ ಗರ್ಭದಲ್ಲಿದ್ದಾಗ ನಾನು ದಿಕ್ಕೆಟ್ಟು ಪರದೇಶಿಯಾಗಿದ್ದೆ. ನಮ್ಮ ಯಜಮಾನರು ತೀರಿಕೊಂಡರು; ಆಗ ವೈದ್ಯನ ಹಿಟ್ಟುಹಾಕದೆ ಮನೆಬಿಟ್ಟು ಓಡಿಸಿಬಿಟ್ಟ. ನಾನು ಅಲ್ಲಿ ಇಲ್ಲಿ ಬಿದ್ದು ಮಹಾತಾಯೀ ಪಾದ ಸೇರಿದೆ. ಆಗವರು ಒಬ್ಬ ಆಳನ್ನು ಹುಡುಕುತ್ತಿದ್ದರು.

ನನ್ನನ್ನು ಹೊಟ್ಟೇಲಿ ಹುಟ್ಟಿದ ಮಗಳಿಗಿಂತಲೂ ಹೆಚ್ಚಿನ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಅಮ್ಮಾವರ ಜೊತೆಯಲ್ಲಿ ಊಟ ಒಂದು ಮಾಡುತ್ತಿರಲಿಲ್ಲ ಅಷ್ಟೆ. ಮಿಕ್ಕೆಲ್ಲಾ ವಿಚಾರಗಳಲ್ಲಿಯೂ ಒಂದೇ ಜಾತಿ, ಒಂದೇ ಮನೆಯವರಿದ್ದ ಹಾಗೆ ಇದ್ದೆವು. ಅಮ್ಮಾವರ ಯಜಮಾನರು ಮೊದಲಿಂದಲೂ ಕೊಂಚ ಹಾಗೆ ಹಾಗೇನೇ. ಯಾವಾಗ ನೋಡಲಿ ಕುಡಿತ, ಜೂಜು ಆಡೋದು, ಕೆಟ್ಟ ಹೆಂಗಸರ ಸಹವಾಸ ಮಾಡೋದು–ಹೀಗೆ ಕಾಲ ಹಾಕುತ್ತಾ ಇದ್ದರು. ರಾಯರ ಮೊದಲಿನ ಹೆಂಡತಿ ಮಗ....ರಂಗಸ್ವಾಮಿ...ಅವನೇ ಸಂಸಾರ ನೋಡಿಕೊಳ್ಳುತ್ತಿದ್ದ. ಒಂದು ದಿವಸ ಯಾವದೋ ಮಾತಿಗೆ ಅಮ್ಮಾವರಿಗೂ ಅವನಿಗೂ ವ್ಯಾಜ್ಯ ಬಂದು ಅವನು ಮನೆಬಿಟ್ಟು ಹೊರಟುಹೋದ ಇದುವರೆಗೆ–ಏನಾದ ಎಲ್ಲಿಗೆ ಹೋದ ಒಂದೂ ಗೊತ್ತಿಲ್ಲ. ಅವನ ಸುದ್ದಿ ಒಬ್ಬರೂ ಹೇಳುವವರು ಇಲ್ಲ. ಆಮೇಲೆ ನಮ್ಮ ಸುಂದರೂ ಪುಟ್ಟು ಹುಟ್ಟಿದರು. ಮಕ್ಕಳೇನೋ ಆಗುತ್ತಿದ್ದರೂ ಹೆಂಡತಿ ಕಂಡರೆ ಮಹಾರಾಯನಿಗೆ ಏನೂ ವಿಶ್ವಾಸ ಇರಲಿಲ್ಲ. ಕುಡಿದು ಬರೋದು ಸುಮ್ಮನೆ ಹೆಂಡತಿಯನ್ನು ಹಿಡಿದುಕೊಂಡು ಹೇರೋದು ಹೀಗೇ ಆಗಿಆಗಿ ಆ ನನ್ನ ತಾಯಿ ನಾರ್ಲ್ಲಕೊಂಡು ಕ್ಷಯರೋಗ ಬಂದಹಾಗೆ ಆಗಿಬಿಟ್ಟರು. ಆ ಸಂದರ್ಭದಲ್ಲಿ ಐದು ತಿಂಗಳು ಆಗಿತ್ತು. ಒಂದು ದಿವಸ ಯಥಾಪ್ರಕಾರ ಕುಡಿದು ಬಂದದ್ದೇ ಹೆಂಡತಿಯನ್ನು ಹೇರೋದಕ್ಕೆ ಮೊದಲು ಮಾಡಿದ. ಬಿಡಿಸಿಕೊಳ್ಳುವುದಕ್ಕೆ ಹೋದ ನನಗೂ ಚೆನ್ನಾಗಿ ಬಿತ್ತು. ಈ ಸುಂದರೂ ಒಂದು ಕಡೆ ಗೊಳೋ ಎಂದು ಅಳುವುದಕ್ಕೆ ಆರಂಭಿಸಿತ್ತು. ಆಗ ಯಾವುದೋ ಮಾಯೆಯಲ್ಲಿ ರೋಷದಿಂದ ಹೆಂಡತಿಯನ್ನು ಮಹರಾಯ ಒದ್ದ ; " ಅಯ್ಯೋ " ಎಂದು ಚೀರಿ ಬಿದ್ದುಬಿಟ್ಟಳು. ಗರ್ಭಸ್ರಾವವಾಗಿ ಹಾಗೇ ಪ್ರಾಣ ಹೋಗಿಬಿಟ್ಟಿತು. ಹೆಂಡತಿ ಪ್ರಾಣಬಿಟ್ಟದ್ದು ನೋಡಿದ್ದೇ ಹೇಳದೇ ಕೇಳದೇ ಪಲಾಯನ ಮಾಡಿಬಿಟ್ಟ. ಹಾಗೂ ಹೀಗೂ ಹೆಣ ಸಾಗಿಸಿದ್ದಾಯಿತು. ಮಾರನೆಯ ಬೆಳಿಗ್ಗೆ ಸಾಲಗಾರರು ಬಂದು ಮಕ್ಕಳನ್ನೂ ನನ್ನನ್ನೂ ಹೊರಗೆ ಹಾಕಿದರು. ಇವೆರಡೂ " ಗೋಳೋ " ಎಂದು ನನ್ನ ಕುತ್ತಿಗೆ ತಬ್ಬಿಕೊಂಡು ಅಳುವುದಿಕ್ಕೆ ಮೊದಲು ಮಾಡಿದವು ನನ್ನ ಕರುಳು ಯಾಕೋ " ಚುರ್ " ಅಂತು. ನೆಂಟರು ಇಷ್ಟರು ಎಲ್ಲರೂ ಇದ್ದಲ್ಲಿಯೇ ಅಡಗಿಕೊಂಡು ಬಿಟ್ಟರು. ತಬ್ಬಲಿ ಮಕ್ಕಳ ಗತಿಯೇನು ? ನಾನು ಯೋಚನೆ ಮಾಡಿ ದಿಕ್ಕಿಲ್ಲದ ಪರದೇಶಿ

ಯನ್ನು ಕೈಹಿಡಿದ ತಾಯೀಋಣ ಹೀಗಾದರೂ ತೀರಿಸೋಣ ಎಂದು ನಿಶ್ಚಯಿಸಿ, ಮಕ್ಕಳ ಜೊತೆ ಇಲ್ಲಿಗೆ ಬಂದೆ"

ಎಂದು ಹೇಳುತ್ತ ಹೇಳುತ್ತ ಗಂಟಲು ಕಟ್ಟಿಬಂದು ಮಾತು ನಿಂತು ಹೋಯಿತು. ಚಂದ್ರನ ಸೆರಗು ಕಣ್ಣೀರಿನ ಕಾಲುವೆ ತಡೆಯಲು ಯತ್ನಿಸಿ ನೆನೆದುಹೋಗಿತ್ತು. ಭಟ್ಟರ ಕಣ್ಣಿನಲ್ಲಿಯೂ ನೀರೂರಿತ್ತು.

"ಈಗಲೂ ಮಕ್ಕಳನ್ನು ಬಿಡುವುದಕ್ಕೆ ನನಗೆ ಇಚ್ಛೆಯಿಲ್ಲ. ಆದರೆ ವಯಸ್ಸಾಯಿತು. ಎದ್ದರೆ ಕೂರುವುದಿಕ್ಕಾಗುವುದಿಲ್ಲ, ಕೂತರೆ ಏಳುವುದಿಕ್ಕಾಗುವುದಿಲ್ಲ. ಸಂಪಾದನೆ ಹೇಗೆ ಮಾಡುವುದು—ಇವುಗಳನ್ನು ಹೇಗೆ ಸಾಕುವುದು. ಅದಕ್ಕೋಸ್ಕರ ಯಾರಾದರೂ ಮಹಾರಾಯರ ವಶಕ್ಕೆ ಒಪ್ಪಿಸುವುದೆಂದು ನಾನು ನಿಶ್ಚಯಿಸಿದೆ."

"ಎಂತಹ ಅಪರೂಪದ ಜೀವ ನಿನ್ನದು ರಾಮಕ್ಕಾ." ಎಂದು ಚಂದ್ರಮ್ಮ ನುಡಿದಳು. ಅದಕ್ಕೆ ಭಟ್ಟರೂ ತಲೆದೂಗಿದರು.

"ಭಟ್ಟರು ಹೇಳಿದ್ದಕ್ಕೆ ಏನು ಮಾಡಿದೆ. ಒಪ್ಪುವುದು ತಾನೇ. ಲೋಕದಲ್ಲಿ ಯಾರು ಯಾರು ಸೇರಬೇಕೋ, ಯಾರ ಮನೆ ಯಾವದೋ, ಯಾರ ಅನ್ನ ಎಲ್ಲಿದೆಯೋ ಯಾರಿಗೆ ಗೊತ್ತು ?"

"ಆದರೆ ನಿಮಗೆ ಹೊರೆಯಾಗಲ್ಲವೇ ತಾಯಿ. ಎರಡೂ ಮಕ್ಕಳೂ ನಾನೂ........"

"ಹೊರೆಯೇನೂ ಇಲ್ಲ ರಾಮಕ್ಕಾ. ನೀನು ಅದನ್ನೇನೂ ಯೋಚಿಸಬೇಡ. ನಮ್ಮ ಚಂದ್ರ ನೂರಾರು ಜನರನ್ನು ಸಾಕುತ್ತಾಳೆ; (ನೂರಾರು ಜನರು ಅವಳನ್ನು ಸಾಕುತ್ತಾರೆ.) ಅವಳ ಮನೆಯೆಂದರೆ ಸಾಕ್ಷಾತ್ ನಂದಗೋಕುಲ."

"ಅಂದರೆ........"

"ಅಂದರೆ....ಹೇಳು ಚಂದ್ರಾ....ನೀನೇ ಹೇಳು."

"ಅಂದರೆ....ನಾವು ಕಲಾವಂತರು"

ರಾಮಕ್ಕನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ಕೋಟಿ ಸಿಡಿಲುಗಳ ಹೊಡೆತ ಅವಳಿಗೆ ಒಮ್ಮೆಲೇ ಆದಂತಾಯಿತು. ಕಣ್ಣು ಗತ್ತಲೆ ಇಟ್ಟುಕೊಂಡು ಬಂದಿತು. ತಲೆ ಸಿಡಿಯುವಂತಾಗಿ ಅದನ್ನು ತಡೆಯು

ವಂತೆ ಕೈಗಳಿಂದ ಭದ್ರವಾಗಿ ತಲೆಯನ್ನು ಹಿಡಿದುಕೊಂಡು ಅಧೋಮುಖಿಯಾದಳು. ಕಣ್ಣು ಮುಂದೆ ರೌರವ ನರಕಕ್ಕೂ ಮೀರಿದ ಚಿತ್ರಗಳು ಒಂದಾಗುತ್ತಲೊಂದು ಜಾರುತ್ತ ಬಂದವು. ತನ್ನ ಧಣಿ, ಹೆಂಗಸು, ಹೆಂಡಗಳ ದಾಸನಾಗಿ ತನ್ನ ಮನೆಯನ್ನೇ ಮುರಿದುಕೊಂಡು, ತನ್ನ ಮಡದಿಯನ್ನೇ ಕೊಂದ ಘೋರ ಘಟನೆ ವಿಕಾರ ಕರಾಳ ಸ್ವರೂಪದಲ್ಲಿ ಬಂದು ಎದುರಿಗೆ ನಿಂತಂತಾಯಿತು.

"ಅಂತಹ ಸ್ತ್ರೀಯರಲ್ಲಿ ಸುಂದರನನ್ನೂ ಒಬ್ಬಳನ್ನಾಗಿ ಮಾಡಲೇ!" ಎಂದು ಮನಸ್ಸಿನೊಂದಿಗೆ ಹೋರಾಡಲಾರಂಭಿಸಿದಳು. ಮರುಕ್ಷಣವೇ "ಅವಳ ಹಣೆಯಲ್ಲಿ ಆ ಬಾಳೇ ಬರೆದಿದೆಯೇನೋ" ಎಂದುಕೊಳ್ಳುವಳು. ಎದುರಿಗೆ ತನ್ನ ಗತಸ್ವಾಮಿನಿ ನಿಂತು "ನನ್ನ ಕಂದನನ್ನು ಇಷ್ಟು ದಿವಸ ತಾಯಿಗಿಂತಲೂ ಹೆಚ್ಚಿನ ಪ್ರೇಮದಿಂದ ಪೊರೆದು ಈಗ ಪಪಾತಕ್ಕೆ ತಳ್ಳುವೆಯಾ ರಾಮಕ್ಕಾ" ಎಂದು ಅಂಗಲಾಚುವ ನೋಟ. ಈ ತುಮುಲ ಮನೋವಿಪ್ಲವಕ್ಕೆ ಸಿಲುಕಿ,

"ಇಲ್ಲ ತಾಯಿ. ಸಾಧ್ಯವಿಲ್ಲ. ನಾನು ಜಾತಿಯಾದರೂ ಕೆಟ್ಟೇನು ಆದರೆ ಸುಂದರನನ್ನು ನಿಮ್ಮ........" ಎಂದು ಉದ್ವೇಗದಿಂದ ನುಡಿದಳು. ಭಟ್ಟರು ತಿರಸ್ಕಾರದಿಂದ ರಾಮಕ್ಕನನ್ನು ನೋಡುತ್ತಾ

"ಅಲ್ಲಿ ಏನಾಗುತ್ತೆ ಗೊತ್ತೇ ರಾಮಕ್ಕಾ...."

"ಏನಾಗುತ್ತದೆ."

"ಚಂದ್ರನ ಮನೆಯಲ್ಲಿ ಆಗುವುದಕ್ಕಿಂತ ಹೊಲಸು ವ್ಯಾಪಾರ. ಇಲ್ಲಿ ಕಲಾವಂತೆ—ಅಲ್ಲಿ ಸಾಮಾನ್ಯಸೂಳೆ. ಇಲ್ಲಿ ನಾಲ್ಕು ಜನರು ಮರ್ಯಾದೆ, ಪ್ರೇಮಕ್ಕೆ ಪಾತ್ರಳು—ಅಲ್ಲಿ ತುಚ್ಛಳು, ದೂಷಿತಳು. ಇಲ್ಲಿ ನಾಲ್ಕಾರು ಜನರನ್ನು ಕಾಪಾಡಲು ಸಮರ್ಥೆಯಾದ ಶ್ರೀಮಂತೆ—ಅಲ್ಲಿ ಎಲ್ಲರಿಂದಲೂ ತಿರಸ್ಕರಿಸಲ್ಪಡುವ ಭಿಕ್ಷುಕಿ-ಹೇಳು ಯಾವ ಬಾಳು ಮೇಲು. ಜತೆಗೆ 'ವ್ರತಗೆಟ್ಟರೂ ಸುಖವಿಲ್ಲ' ವೆಂಬಂತೆ ಜಾತಿಹೀನತೆ ಬೇರೆ"

"ಹಾಗಾದರೆ ಮರ್ಯಾದೆಯಾಗಿ ಬಾಳಲು ಮಾರ್ಗವೇ ಇಲ್ಲವೇ?"

"ಬಡವರಿಗಿಲ್ಲ ರಾಮಕ್ಕಾ. ಮರ್ಯಾದೆಯೆಂಬುದು ಶ್ರೀಮಂತನ ಕೈಗೂಸು. ಅದನ್ನು ಮನೆಯಲ್ಲಿಟ್ಟುಕೊಂಡು ಪೋಷಿಸುವಷ್ಟು ಸಾಮರ್ಥ್ಯ

ಬಡವರಿಗಿಲ್ಲ. ಬಂದದ್ದನ್ನು ಅನುಭವಿಸಬೇಕು. ದೊರೆತದ್ದರಲ್ಲಿ ಸುಖ ಪಡಬೇಕು."

"ಎಲ್ಲಾ ಕಡೆಯಲ್ಲಿಯೂ ಹೀಗೇ ನಡೆಯುತ್ತಿದೆಯೇ? ಹೆಂಗಸು ಬಾಳ ಬೇಕಾದರೆ ತನ್ನ ದೇಹವನ್ನು ಮಾರಿಕೊಂಡೇ ಬಾಳಬೇಕೇ?"

"ಮಾರಿಕೊಂಡೇ ಬಾಳಬೇಕೆಂದಲ್ಲ....ತೋರಿಸಿಕೊಂಡು ಬಾಳಬೇಕು. ಗಂಡಸನ್ನು ಗಂಡಸೆಂದು ಯಾರೂ ಮೆಚ್ಚುವುದಿಲ್ಲ. ಪಂಡಿತನೆಂದು—ಕವಿಯೆಂದು—ಗಾಯಕನೆಂದು—ವೈದ್ಯನೆಂದು ಲೋಕವು ಮೆಚ್ಚುತ್ತದೆ.....ಆದರೆ ಹೆಂಗಸನ್ನು ಹೆಂಗಸೆಂದೇ ಮೆಚ್ಚುತ್ತದೆ. ಲೋಕ ಗಂಡಸಿಂದ ಕೋರುವುದು ತನ್ನ ಹಿತ—ತನ್ನ ಅಭ್ಯುದಯ; ಹೆಂಗಸಿನಿಂದ ಕೋರುವುದು ತನ್ನ ವಿಲಾಸ—ತನ್ನ ಉಪಭೋಗ."

"ಹಾಗಾದರೆ ಗತಿ"

"ಈ ಸ್ಥಿತಿ ಬದಲಾಯಿಸಿದ ಮೇಲೆ."

"ಅದು ಯಾವಾಗ."

"ಭಗವಂತನೇ ಬಲ್ಲ. ಅಲ್ಲಿಯ ತನಕ 'ಕಾಲಾಯ ತಸ್ಮೈನಮಃ' ಎಂದು ತಲೆಬಾಗುವುದು ನಮ್ಮ ಕೆಲಸ."

"ಅಯ್ಯೋ. ಇನ್ನೇನುಗತಿ. ಮಠಗಳಿಲ್ಲವೇ ಸರ್ಕಾರವಿಲ್ಲವೇ?"

"ಎಲ್ಲವೂ ಇದೆ. ಆದರೆ ಬಡವರ ಪಾಲಿಗಲ್ಲ. ಬಡವರ ಭವಿಷ್ಯತ್ತನ್ನು ಅವರೇ ನಿರ್ಣಯಿಸಿಕೊಳ್ಳಬೇಕು."

ರಾಮಕ್ಕನಿಗೆ ದಿಕ್ಕು ತೋರದಂತಾಯಿತು.

"ನೋಡು ರಾಮಕ್ಕಾ, ನಾಳೆ ನೀನು ಸತ್ತೆಯೆನ್ನು. ಈ ಮಕ್ಕಳು ಬೀದಿಯ ಭಿಕಾರಿಗಳಾದರೆ ನಿನ್ನ ಆತ್ಮಕ್ಕೆ ಏನು ಸಮಾಧಾನ....ಏನು ಶಾಂತಿ!"

"ಏನೂ ಇಲ್ಲ. ಆದರೆ ಇರುಳು ಕಂಡ ಭಾವಿಗೆ ಹಗಲು ಹೇಗೆ ತಳ್ಳಲಿ ಈ ಕಂದಮ್ಮಗಳನ್ನು........ಜಾತಿಗೆಟ್ಟರೂ ಚಿಂತೆಯಿಲ್ಲ......ಅವು ಮರ್ಯಾದೆಯಾಗಿ ಬಾಳಿದರೆ ಸಾಕು....ಇವತ್ತೇ ಮತ್ತೆ ಹೋಗಿ ಪಾದ್ರಿಗಳನ್ನು ಕಂಡುಬರುತ್ತೇನೆ."

"ಹುಚ್ಚೀ. ಪಾದ್ರಿಯೇನು ಮಾಡುತ್ತಾನೆ. ಈ ಹೊತ್ತು ಬೆಣ್ಣೆಯಂತಹ ಮಾತನಾಡಿ ನಿಮ್ಮ ಜಾತಿ ಕೆಡಿಸಿದ ಮೇಲೆ ನಾಳೆ ಕಾಲು ಕೆಳಗಿನ

ಕಸಕ್ಕಿಂತಲೂ ನಿಕೃಷ್ಟವಾಗಿ ಕಾಣುತ್ತಾನೆ. ಹಿಂದುಗಳು ನಿಮ್ಮನ್ನು ಜತೆ ಸೇರಿಸುವುದಿಲ್ಲ–ಕ್ರೈಸ್ತರು ಕೂಡುವುದಿಲ್ಲ- ಹೀಗಾಗಿ ತ್ರಿಶಂಕುಸ್ವರ್ಗವೇ ಗತಿಯಾಗುತ್ತದೆ. ಮೊದಲುಮೊದಲು "ಹಾಗೆ ಮಾಡುತ್ತೇವೆ–ಹೀಗೆ ಮಾಡುತ್ತೇವೆ" ಎಂದು ಆಸೆಯಿಟ್ಟು ತಮ್ಮ ಮತಕ್ಕೆ ಸೇರಿಸಿಕೊಂಡು, ಅನಂತರ ಜಾತಿಗೆಟ್ಟವರನ್ನು ಹೊರದೂಡಿಬಿಡುತ್ತಾರೆ. ಇದಕ್ಕೇ ಭಗವಾನ್ ಶ್ರೀಕೃಷ್ಣನು "ಸಧರ್ಮೇ ನಿಧನಂ ಶ್ರೇಯಃ । ಪರಧರ್ಮೋ ಭಯಾವಹಃ" ಎಂದು ಹೇಳಿರುವುದು. ರಾಮುಕ್ಕಾ, ಈ ಕೊನೆಗಾಲದಲ್ಲಿ ನಿನಗೇತಕ್ಕೆ ಈ ದುರ್ಬುದ್ಧಿ. ಕೆಟ್ಟದ್ದಾಗಲೀ ಒಳ್ಳೆಯದಾಗಲಿ ನಮ್ಮ ಧರ್ಮವೇ ನಮಗೆ ಒಳ್ಳೆಯದು—ನಮ್ಮ ಧರ್ಮವೇ ನಮಗೆ ದೊಡ್ಡದು. ಅದನ್ನು ಬಿಟ್ಟು ಏಳಿಗೆಯುಂಟೇ!"

"ಸೂಳೆಗಾರಿಕೆಗೆ ಬಿದ್ದರೆ ಏಳಿಗೆಯುಂಟೇ ಭಟ್ಟರೇ–ಎಲ್ಲಾ ತಿಳಿದವರು ನೀವೇ ಹೀಗೆ ಹೇಳುವುದೆಂದರೆ....ನೀವೂ ಬ್ರಾಹ್ಮಣರು....ಈ ಮಕ್ಕಳು ನಿಮ್ಮ ಜಾತಿಗೆ ಸೇರಿದವು ಮನಸ್ಸೊಪ್ಪಿ ನೀವೇ ಈ ಮಾತು ಹೇಳುತ್ತೀರಾ?"

ಭಟ್ಟರಿಗೂ, ಚಂದ್ರಮ್ಮನಿಗೂ ದೊಡ್ಡ ಸಮಸ್ಯೆಯೇ ಬಂದು ಮುಂದೆ ನಿಂತಹಾಗಾಯಿತು. ಇದಕ್ಕೆ ನಿವಾರಣೋಪಾಯವನ್ನು ಯೋಚಿಸಿ

"ಅಲ್ಲಾ ರಾಮುಕ್ಕಾ, ಚಂದ್ರನೇನೋ ವೃತ್ತಿಯಲ್ಲಿ ವೇಶ್ಯೆ. ಆದರೆ ಅವಳು ನಿನ್ನ ಮಕ್ಕಳನ್ನು ದತ್ತು ತೆಗೆದುಕೊಂಡರೆ ಅವರನ್ನೂ ವೇಶ್ಯೆಯರನ್ನಾಗಿ ಮಾಡುತ್ತಾಳೆಂದು ನೀನೇತಕ್ಕೆ ಭಯಪಡಬೇಕು."

"ಹಾಗಾದರೆ ಇನ್ನೇನು ಮಾಡುತ್ತಾರೆ."

"ವಿದ್ಯೆ ಕಲಿಸುತ್ತಾಳೆ—ಸ್ಕೂಲಿಗೆ ಕಳುಹಿಸುತ್ತಾಳೆ—ಕೊನೆಗೆ ಇನ್ನು ನಾಲ್ಕೈದು ವರ್ಷ ಕಳೆದ ಮೇಲೆ ಸುಂದರನನ್ನು ಯೋಗ್ಯನಾದ ವರನಿಗೆ ಕೊಟ್ಟು ಮದುವೆ ಮಾಡುತ್ತಾಳೆ—ಅಲ್ಲವೇ ಚಂದ್ರಾ"

"ಖಂಡಿತವಾಗಿ ಅದೇ ನನ್ನ ಆಸೆ. ಈಗ ನಮ್ಮ ಕುಲದಲ್ಲಿ ಮದುವೆಯಾಗದಿದ್ದರೆ ಅದು ದೊಡ್ಡ ಕಳಂಕವೆಂಬ ಭಾವನೆ ಹುಟ್ಟಿದೆ. ಇನ್ನು ಕೆಲವು ವರ್ಷಗಳೊಳಗಾಗಿ ಎಲ್ಲಾ ವೇಶ್ಯೆಯರೂ ಗರತಿಯರಾಗಿ ಬಿಡುತ್ತಾರೆ."

ರಾಮುಕ್ಕನ ಮುಖದ ಮೇಲೆ ಸ್ವಲ್ಪ ನಗೆ ಮೂಡಿತು. ಈ ಭರವಸೆ ಅವಳ ಸಂಶಯವನ್ನು ದೂರಮಾಡಿತು. ಕೃತಜ್ಞತೆಯಿಂದ ಅವಳ ಸರಳ, ನಿಷ್ಪಾಪ ಹೃದಯ ಬಿರಿಯಿತು. ಎದ್ದು ಬಂದು ಭಟ್ಟರಿಗೆ ಅಡ್ಡಬಿದ್ದು

"ಏನು ಬೇಕಾದರೂ ಮಾಡು ಮಹಾರಾಯ. ಆ ಮಕ್ಕಳನ್ನು ನಿಮ್ಮ ವಶಮಾಡಿಬಿಡುತ್ತೇನೆ. ತಬ್ಬಲಿ ಕಂದಗಳನ್ನು ಕಾಪಾಡಿದ ಪುಣ್ಯ ನಿಮ್ಮ ದಾಗುತ್ತದೆ. ನನಗೂ ಒಡತಿಯ ಋಣ ಕಳೆಯುತ್ತದೆ"

ಎಂದು ಕಣ್ಣೀರ್ಗರೆದು ಚಂದ್ರಮ್ಮನ ಕಡೆ ತಿರುಗಿ

"ಇನ್ನು ಮುಂದೆ ಅವಕ್ಕೆ ನೀವೇ ತಾಯಿ....ನೀವೇ ತಂದೆ—ನೀವೇ ಎಲ್ಲಾನೂ. ನಿಮ್ಮ ಉಪಕಾರಕ್ಕೆ ನೂರುಪಾಲು ಪ್ರತ್ಯುಪಕಾರ ಅವು ಮಾಡುತ್ತವೆ. ಒಳ್ಳೇ ಮಕ್ಕಳು. ದೇವರು ನಿಮಗೆ ಒಳ್ಳೆಯದು ಮಾಡಲಿ ತಾಯೀ" ಎಂದು ಹರಸಿದಳು.

ಹೊತ್ತು ಮೀರುತ್ತ ಬಂದಿತ್ತು. ಭಟ್ಟರ ಹೊಟ್ಟೆಯೂ "ಚುರಚುರ" ವೆನ್ನುತ್ತಿತ್ತು. ಆದರೂ ಬಂದ ಕೆಲಸ ಆದದ್ದೊಂದು ದೊಡ್ಡ ಸಮಾಧಾನ. ಭಟ್ಟರು ಚಂದ್ರಮ್ಮನನ್ನು ಕರೆದುಕೊಂಡು ದಾರಿಯಲ್ಲಿ ಬರುತ್ತಿದ್ದ ಮೋಟಾರ ಬಸ್ಸಿನಲ್ಲಿ ಕುಳಿತು ಗೃಹಾಭಿಮುಖರಾದರು. ಜಗತ್ತಿನ ವ್ಯಾಪಾರಗಳನ್ನು ದೂರದಿಂದಲೇ ನೋಡುತ್ತಿದ್ದ ಸೂರ್ಯದೇವ ಕಣ್ಣುಗಳಿಂದ ಕೆಂಡವನ್ನು ಕಾರತೊಡಗಿದನು.

೮

ವಾದ ಒಳ್ಳೆಯ ಹುರುಪಿನಿಂದ ಸಾಗಿತ್ತು. ಮೂಲೆಯೊಂದರಲ್ಲಿ ಕೈ ಮೇಜಿನ ಮುಂದೆ ಕುಳಿತಿದ್ದ ರಾಮಕೃಷ್ಣಯ್ಯ ಯಾವದೋ ಕೇಸಿನ ಕಟ್ಟನ್ನು ನೋಡುವಂತೆ ನಟಿಸುತ್ತಾ ಈ ಗೆಳೆಯರ ಸಂವಾದವನ್ನು ಆಸಕ್ತಿಯಿಂದ ಆಲಿಸುತ್ತಾ ಕುಳಿತಿದ್ದ. ನ್ಯಾಯಸ್ಥಾನಗಳಲ್ಲಿ ಮಾತುಮಾತಿಗೆ ಹೋರಾಡಿ ಹೋರಾಡಿ ಲಾಯರುಗಳ ಜೀವನವೆಂದರೆ ಹೆಜ್ಜೆಹೆಜ್ಜೆಗೆ ಹೋರಾಡುವ ಜೀವನವಾಗಿ ಪರಿಣಮಿಸುವುದೇನು ಹೆಚ್ಚಲ್ಲ. ಸ್ವಾಮಿ ಮೇಜಿನ ಮೇಲೆ ಕಾಲುಚಾಚಿ "ಫ್ಲಾರ್ ಡಿ ಸ್ಪೆನ್ಸರ್" ಸಿಗಾರಿನಿಂದ ಭುಗುಭುಗಿಲೆಂದು ಹೊಗೆಯನ್ನು ಚಲ್ಲುತ್ತಾ ತನ್ನ ಗೆಳೆಯರ ವಾದವನ್ನು ಕೇಳುತ್ತ ಕುಳಿತಿದ್ದಾನೆ. ಮಧ್ಯೆಮಧ್ಯೆ ಅವನಾಡುವ ಒಂದೊಂದು ಮಾತುಗಳು ವಾದಕ್ಕೆ ಕಳೆಯನ್ನೂ ವಾದಿಗಳಿಗೆ ಹುರುಪನ್ನೂ ಕೊಡುತ್ತಿದ್ದವು.

ವಾಸು, ಸ್ವಾಮಿ ಒಟ್ಟಿಗೆ ಎಲ್‌ಎಲ್.ಬಿ., ಯಲ್ಲಿ ಓದುತ್ತಿದ್ದವರಾದುದರಿಂದ ಅವರಲ್ಲಿ ಐಕ್ಯಮತ್ಯವೂ ಆಗಾಗ್ಗೆ ಮೂಡುತ್ತಿತ್ತು. ರಂಗಣ್ಣನ ಸ್ನೇಹ

ಸ್ವಾಮಿಗಾದುದು ಅವನು ಮೈಸೂರಿನ ನ್ಯಾಯಸ್ಥಾನದಲ್ಲಿ ವಾದಿಸುವುದಕ್ಕೆ ನಿಂತಂದಿನಿಂದ. ಸ್ವಾಮಿಯ ಆಫೀಸೆಂದರೆ ನ್ಯಾಯವಾದಿಯ ಕಾರ್ಯಾಲಯ ಮಾತ್ರವೇ ಅಲ್ಲದೆ ಅನೇಕ ಸಾರ್ವಜನಿಕ ಸಂಸ್ಥೆಗಳ ಕಾರ್ಯಕ್ಷೇತ್ರವೂ ಆಗಿತ್ತು. ಸ್ವಾಮಿಯ ವಕ್ತೃತ್ವ, ಕುಶಾಗ್ರಮತಿಗಳಿಗೋಸ್ಕರ ಎಷ್ಟೋ ಸಂಸ್ಥೆಗಳು ಸ್ಪರ್ಧೆಯಿಂದ ಅವನನ್ನು ದೊರಕಿಸಿಕೊಳ್ಳುತ್ತಿದ್ದವು. "ಎಲ್ಲ ಸಂಸ್ಥೆಗಳೂ ತನ್ನವು" ಎಂದು ಭಾವಿಸಿ ಆದಷ್ಟು ಮಟ್ಟಿಗೆ ಹಾಗೇ ವರ್ತಿಸಲು ಯತ್ನಿಸುತ್ತಿದ್ದುದು ಸ್ವಾಮಿಯ ಲೋಕಪ್ರಿಯತೆಗೆ ತುಂಬ ಸಹಕಾರಿಯಾಗಿದ್ದಿತು. ತನಗೆ ವಿಶ್ವಾಸವಿಲ್ಲದ ಸಂಸ್ಥೆಗಳಿಗೂ ನಿರ್ವಂಚನೆಯಿಂದ ಅವನು ಸಹಾಯಮಾಡುತ್ತಿದ್ದ. ಹೀಗಾಗಿ ಯಾವ ಸಂಸ್ಥೆ, ಯಾವ ಕಮಿಟಿ, ಯಾವ ಸಂಘ, ಯಾವ ಕೂಟದಲ್ಲಿ ನೋಡಿದರೂ ಸ್ವಾಮಿ ತಾನೇತಾನಾಗಿ ಇರುತ್ತಿದ್ದ. ವಾಸು ಸ್ವಾಮಿಯ ಅಂತರಂಗ ಮಿತ್ರನಾದರೂ ಅವನಿಂದ ಅನೇಕ ವಿಧದಲ್ಲಿ ಬೇರೆಯಾಗಿದ್ದ. ಸ್ವಾಮಿಯ ಅನೇಕ ನಡವಳಿಕೆಗಳೂ, ಆಚರಣೆಗಳೂ ಅವನಿಗೆ ಸರಿಬರುತ್ತಿರಲಿಲ್ಲ. ಅವುಗಳಲ್ಲಿ ಕರೆದ ಕಡೆಗೆ ಹೋಗಿ ಮನಸ್ಸು ಬಂದಂತೆ ಹರಟೆ ಬರುವುದಂತೂ ವಾಸುವಿಗೆ ಸ್ವಲ್ಪವೂ ಸೇರುತ್ತಿರಲಿಲ್ಲ. ವಾಸುವಿಗೆ ಸ್ವಾಮಿಯ ಸ್ನೇಹವನ್ನು ಬಿಟ್ಟುಕೊಟ್ಟು ಬಾಳುವಷ್ಟು ಮನೋದಾರ್ಢ್ಯ ಇರಲಿಲ್ಲ. ತನ್ನ ವಿಲಾಸವೆಲ್ಲಾ ಸ್ವಾಮಿಯ ಖರ್ಚಿನಿಂದಲೇ ನಡೆಯುತ್ತಿದ್ದಾಗ ಯಾವದೋ ಆದರ್ಶದ ಮಾತು ತೆಗೆದು ಇಂತಹ ಅನುಕೂಲವನ್ನು ಕಳೆದುಕೊಳ್ಳುವುದೇ ?

ವಾಸುವಿನೊಂದಿಗೆ ಘೋರ ವಾದಕ್ಕೆ ತೊಡಗಿದ್ದ ರಂಗಣ್ಣ ವೃತ್ತಿಬಂಧುವಾಗಿದ್ದವನು ಮೆಲ್ಲಮೆಲ್ಲನೆ ಅಂತರಂಗದ ಮಿತ್ರನಾಗುತ್ತ ಬಂದಿದ್ದ. ವಾಸುವಿನ ಗರಡಿಯಲ್ಲಿ ಅವನು ಒಂದೊಂದಾಗಿ ಸಾಮುಗಳನ್ನು ಕಲಿತು, ಒಂದಲ್ಲೊಂದು ದಿವಸ ಗುರುವಿನೊಂದಿಗೆ ಜತೆಹಾಕಿಕೊಳ್ಳುವ ಯೋಚನೆಯಲ್ಲಿದ್ದ. ವೃತ್ತಿಯಲ್ಲಿ ಅವನ ಸ್ಥಿತಿ ವಾಸುವಿನಷ್ಟು ಕೇಡಾಗಿಲ್ಲದಿದ್ದರೂ ಉತ್ತಮವಾಗಿದೆಯೆಂದು ತೋರಿಸಿಕೊಳ್ಳುವಷ್ಟು ಧಾರಾಳವನ್ನು ಅವನು ಅವಲಂಬಿಸಿರಲಿಲ್ಲ. ಈ ಮೂವ್ವರು ಗೆಳೆಯರನ್ನೂ ಒಂದುಗೂಡಿಸಿದ್ದುದು "ಕುದುರೆ ಜೂಜ"ನ ಆಸಕ್ತಿ. ಜೂಜಿನ ವ್ಯವಸ್ಥಾಪಕರ ಪ್ರತಿನಿಧಿ ಬಂದಿತೆಂದರೆ ಸಾಲವಾದರೂ ಮಾಡಿ ಯಾವುದಾದರೂ ಕುದುರೆಯ ಮೇಲೆ ಪಣಕಟ್ಟುವುದು ವಾಡಿಕೆಯಾಗಿ

ಬಿಟ್ಟಿತ್ತು.

"ಆಯಿತಲ್ಲಾ ಮಂಗಳಾರತಿ. ನಿನ್ನನ್ನು ನಂಬಿ 'ಸಿಲ್ವರ್ ಕಿಂಗ್' ಮೇಲೆ ಸುರಿದದ್ದಕ್ಕೆ" ಎಂದು ವಾಸುವಿನ ಆಕ್ಷೇಪ.

"ನಿನ್ನ ಮಾತು ಕೇಳಿಕೊಂಡು 'ಸ್ವಿಫ್ಟ್' ಮೇಲೆ ಸುರಿದದ್ದಕ್ಕೆ ಹೋದ ಸಲ ಆಯಿತಲ್ಲಾ ಮೂವತ್ತು ರೂಪಾಯಿ............"

"ಹಾಗಾದರೆ ಈಗೇನು ಮಾಡಬೇಕೆನ್ನುತ್ತೀ"

"ಸ್ಟಾರ್ ಮೇಲೆ ಈ ಸಲ ಎಲ್ಲರೂ ಕಣ್ಣಿಡೋಣ. ಬಂದರೆ ಎಲ್ಲರಿಗೂ ಬರಬೇಕು. ಹೋದರೆ ಎಲ್ಲರಿಗೂ ಹೋಗಬೇಕು."

"ಸ್ಟಾರ್ ಬೇಡ. ಗಿಂಡಿರೇಸಿನಲ್ಲಿ ಅದಕ್ಕೆ ಕೊಂಚ ಘಾಯ ಆಗಿದೆ ಯಂತೆ—'ವ್ಯಾಲೆಂಟೀನೋ' ಮೇಲೆ ಸ್ಟೇಕ್ ಮಾಡೋಣ."

"ಅಯ್ಯೋ ಪೆಚ್ಚೇ! ಎಲ್ಲಿ ಸ್ಟಾರ್, ಎಲ್ಲಿ ವ್ಯಾಲೆಂಟೀನೋ!! ಒಂದು ಕುದುರೆ—ಇನ್ನೊಂದು ಕತ್ತೆ"

"ಹೌದು—ನಿನ್ನ ಬುದ್ಧಿ ಕತ್ತೆ ಬುದ್ಧಿ ಹಾಗೇ ಆಗಿದೆ" ಎಂದು ವಾಸು ಕೆರಳಿ ಕೆರಳಿ ನುಡಿದ. ಇದೇ ಕಾರಣವಾಗಿ ಇಬ್ಬರಿಗೂ ಭಯಂಕರ ಗೊಂದಲವೇ ಹತ್ತಿಬಿಟ್ಟಿತು. ಸಮಯ ನೋಡಿಕೊಂಡು ಸ್ವಾಮಿ ಮೆಲ್ಲನೆ

"ರಾಮಕೃಷ್ಣಪ್ಪಾ, ನೋಡಿ ಕೃಷ್ಣಾಭವನದಲ್ಲಿ ಏನಾದರೂ ಕೊಂಚ ಕಾಫಿ ಸಿಕ್ಕುತ್ತದೆಯೇನೋ"

ಕಾಫಿ ಹೆಸರು ಕಿವಿಗೆ ಬೀಳಲು ವ್ಯಾಜ್ಯ ಅಲ್ಲಿಗೇ ನಿಂತು ಹೋಯಿತು. ರಂಗಣ್ಣ ಸ್ಟಾರ್ ಮೇಲೆ ಪಣಕಟ್ಟಬೇಕೆಂದೂ, ವಾಸು ವ್ಯಾಲೆಂಟೀನೋ ಮೇಲೆ ಕಟ್ಟಬೇಕೆಂದೂ ಸ್ವಾಮಿಯ ತೀರ್ಪಾಗಿ ಹೋಯಿತು. ತೀರ್ಪಿನ ಹೊತ್ತಿಗೆ ಕಾಫಿ, ಜತೆಗೆ ಸ್ವಲ್ಪ "ಚೌ ಚೌ" ಬರಲು ಗೆಳೆಯರು ಹುರುಪಿನಿಂದ ಸ್ವಾಮಿಯ ಆತಿಥ್ಯವನ್ನು ಸ್ವೀಕರಿಸಲಾರಂಭಿಸಿದರು. ರಂಗಣ್ಣ ಮಾತಿನ ಲಹರಿಯಲ್ಲಿ

"ಏನೋ ಸ್ವಾಮಿ. ಮೊನ್ನೆ ಹೈಕೋರ್ಟಿನಲ್ಲಿ ನಿನ್ನ ಮೇಲೆಯೇನೋ ಅಪಾದನೆ ಹೊರಟಿದೆಯಂತೆ!"

"ಹೌದು ಹೌದು! ನನಗೂ ಗುಸಗುಸ ಕೇಳಿಸಿತು. ಏನದು ಸ್ವಾಮಿ!"

ಸ್ವಾಮಿ ಕಣ್ಣು ಕಣ್ಣು ಬಿಡುತ್ತಾ

"ಇದೆಯಲ್ಲಪ್ಪಾ ಹಣೇ ಬರಹ ಯಾರೋ ಕೀಟ್ಲೆಮಾಡಿದ್ದಾರೆ. ಈಗದು ಬ್ರಹ್ಮರಾಕ್ಷಸನಾಗಿದೆ....ಆದರೂ ಚಿಂತೆಯಿಲ್ಲ ..ಹೇಗಾದರೂ ನಿವಾರಿಸಿ ಕೊಳ್ಳಬಹುದು."

"ನೀನೇನೋ ಸ್ಟಾಂಪ್ ಫೀಸ್ ಹಣ ಯಾವದೋ ತಿಂದುಹಾಕಿಬಿಟ್ಟೆ ಯಂತೆ. ಸ್ಟಾಂಪು ಸಾಲದೆಂದು ಕೇಸನ್ನು ಕೋರ್ಟಿನವರು ವಜಾಮಾಡ್ಡಿದಕ್ಕೆ ಕಕ್ಷಿಗಾರ ಬೊಬ್ಬೆ ಹಾಕಿದನಂತಲ್ಲಾ...."

"ನಿಮಗೆಲ್ಲಾ ಗೊತ್ತೇಯಿದೆಯಲ್ಲಾ. ಇನ್ನು ಹೇಳೋದೇನು, ಕೇಳೋ ದೇನು? ನಮ್ಮಲ್ಲಿ ಇದೇನು ಯಾರು ಮಾಡದ್ದಲ್ಲವಲ್ಲಾ"

"ಮಾಡದ್ದಲ್ಲ ಸರಿಯೇ. ಆದರೆ ನಮ್ಮವರ ಬಂಡವಾಳ ಹೀಗೆ ಬಯಲಿಗೆ ಬೀಳುತ್ತಾ ಬಂದರೆ ವೃತ್ತಿಗೆ ಇರೋ ಮರ್ಯಾದೆ ಹೋಗಿ ಬಿಡುತ್ತದೆ."

"ವೃತ್ತಿಗೇನಿದೆ ಮರ್ಯಾದೆ! ಅದೆಲ್ಲಾ ಒಂದು ಭ್ರಾಂತಿ...!! ಯಾವ ದಾದರೂ ಸಾರ್ವಜನಿಕ ಸಂಸ್ಥೆ ಗಂಟುಹಾಕಿಕೊಂಡು ಅಲ್ಲಿ 'ಸುಪ್ರಸಿದ್ಧ ವಕೀಲರಾದ ಸ್ವಾಮಿಯವರು ಇದರ ಅಧ್ಯಕ್ಷರು' ಎಂದು ಹೇಳಿಸಿಕೊಳ್ಳುವುದು; ಕೋರ್ಟಿನಲ್ಲಿ 'ಇಂಥಾ ಸಂಸ್ಥೆಯ ಅಧ್ಯಕ್ಷರಾದ ಸುಪ್ರಸಿದ್ಧ ಸ್ವಾಮಿಯವರು ಈ ಕೇಸಿನಲ್ಲಿ ಕಾಣಿಸಿಕೊಳ್ಳುತ್ತಾರೆ'—ಎಂದು ಹೇಳಿಸಿಕೊಳ್ಳುವುದು ಹೀಗೆ ಕಾಲ ಹಾಕಬೇಕಾಗಿದೆ."

"ಅದೇನೋ ಸರಿ. ಆದರೆ ವೃತ್ತಿಗತಿ ಎಲ್ಲಿಗೆ ಬಂತು. ಜನ ಲಾಯರೆಂದರೆ ಎಷ್ಟು ತಿರಸ್ಕಾರವಾಗಿ ಕಾಣುವುದಕ್ಕೆ ಆರಂಭಿಸಿದ್ದಾರೆ."

"ಅಂತಹವರಿಗೆ ಉಪಾಯವಾಗಿ ಲಾಯರಿಂದಲೇ ಜಗತ್ತು ಉದ್ಧಾರ ವಾಗುವುದು ಎಂದು ಒಪ್ಪಿಸಿ ಕಳುಹಿಸುವುದು."

"ಹೇಗೆ."

"ದೊಡ್ಡವರ ಹೆಸರು ತೆಗೆದುಕೊಳ್ಳುವುದು. ನಿರ್ದಾಕ್ಷಿಣ್ಯವಾಗಿ ಉಪ ಯೋಗಿಸಿಕೊಳ್ಳುವುದು. 'ಭಾರತವರ್ಷದ ದೊಡ್ಡ ದೊಡ್ಡ ಮಹಸೀಯರೆಲ್ಲಾ ಲಾಯರುಗಳೇ ಅಲ್ಲವೆ. ಗಾಂಧಿ, ನೆಹರೂ, ಸಪ್ರೂ, ಸುರೇಂದ್ರ ಬಾನರ್ಜಿ, ದೇಶಬಂಧು ದಾಸ್, ಸೇನಗುಪ್ತ....ನಾನು....ಎಲ್ಲರೂ ಲಾಯರುಗಳೇ ಅಲ್ಲವೆ' ಎಂದು ಗಂಭೀರವಾಗಿ ಹೇಳುವುದು. ಮುಖ್ಯವಾಗಿ ಎಲ್ಲಕ್ಕೂ ಸಾಮರ್ಥ್ಯ

ಬೇಕು ರಂಗಣ್ಣಾ....ನಿನ್ನಂತಹ ಪೆಚ್ಚುಗಳು ಏನು ಮಾಡಿಯಾವು. ಮೊನ್ನೆ ನಡೆದದ್ದು ಕೇಳು ವಾಸು ಹೇಳುತ್ತಾನೆ."

"ಏನಯ್ಯಾ ಅದು ವಾಸು."

"ಸರಿ ಬಿಡಪ್ಪ. ಈ ಮಹಾರಾಯನ ಸಾಹಸಗಳನ್ನೆಲ್ಲಾ ವರ್ಣಿಸುತ್ತ ಕುಳಿತುಕೊಂಡರೆ ಡಾನ್ ಜುವಾನ್, ಕ್ಯಾಸನೋವ ಇಬ್ಬರೂ ನಾಚಿಕೊಳ್ಳ ಬೇಕಾಗುತ್ತದೆ. ಆದರೆ ಸ್ವಾಮಿ, ಅದು ತುಂಬಾ ಅಪಾಯಕರವಾದ ಸಾಹಸ ನೋಡು. ಎಂದೋ ಸಿಕ್ಕಿಹಾಕಿಕೊಂಡು ನೀನು ನರಳುತ್ತೀ."

"ಏನು ಮೊದಲು ಹೇಳಯ್ಯಾ. ಆಮೇಲೆ ಆಗಲಿ ನಿನ್ನ ಹಿತೋಕ್ತಿ. ನನಗೆ ಕೇಳಬೇಕೆಂದು ಆಸೆ ಧುಮುಗುಟ್ಟುತ್ತಿದೆ."

"ಮೊನ್ನೆ....ಅಯ್ಯೋ ನಗು ತಡೀಲಾರೆನಪ್ಪಾ....ಮೊನ್ನೆ, ನಮ್ಮ ಸ್ವಾಮಿ ಒಬ್ಬ ಕಕ್ಷಿಗಾರಳನ್ನು ಪರೀಕ್ಷಣೆ ಮಾಡಿಕೊಂಡಿದ್ದ. ಗಂಡ ತೀರಿ ಕೊಂಡಿದ್ದನಂತೆ, ಮೈದುನನ ಮೇಲೆ 'ಪಾಲಿನ ದಾವೆ,' ಒಂದೋ ಎರಡೋ ಹೀರಿಂಗ್ ಆಗಿತ್ತು. ಈ ತುಂಟ....ಅವಳನ್ನು ಒಂದೆರಡು ಸಲ ಕೆಣಕಿ ನೋಡಿದ್ದಾನೆ. ಅದು ಕೊಂಚ ಘಟ್ಟಿಜೀವ, ಅವನಿಗೆ ಜಗ್ಗಲಿಲ್ಲ. ಕೊನೆ ಗೊಂದು ಮಸಲತ್ತು ಮಾಡಿದ. ಕುಂಬಳಗೋಡು ಟ್ರಾವಲರ್ಸ್ ಬಂಗ್ಲೋದಲ್ಲಿ ಎಲ್ಲಾ ಸಿದ್ಧಮಾಡಿ, ಆಕೆ ಇಲ್ಲಿ ಬಂದರೆ ರಾಮಕೃಷ್ಣಯ್ಯಂಗೆ ಹೇಳಿ ಮೆಲ್ಲನೆ ಕಾರಿನಲ್ಲಿ ಆಕೆಯನ್ನು ಅಲ್ಲಿಗೆ ಸಾಗಿಸಿಕೊಂಡು ಹೋದ. ಆಕೆ, ಇವರ ಬೆಣ್ಣೆ ಮಾತು ಕೇಳಿಕೊಂಡು ಲಾಯರಿಗೆ ಪ್ರಾಣಾಪಾಯ ಆಗಿದೆಯೆಂದು ನಂಬಿ ಹೋದಳು. ಅವಳಿಗೆ ಅಲ್ಲಿ ಸರಿಯಾಗಿ....ಮಾನಾಪಾಯ ಆಯಿತು. ನಮ್ಮ ರಾಯರ ಹಟ ತೀರಿತು. ಇದಕ್ಕಿಂತ ಇನ್ನೇನು ಬೇಕು."

"ಇದನ್ನು ಪೈಶಾಚಕೃತ್ಯವೆಂದೆನ್ನಬೇಕು" ಎಂದು ವ್ಯಕ್ತವಾಗುತ್ತಿದ್ದ ತನ್ನ ಜಿಗುಪ್ಸೆಯನ್ನು ಸೂಕ್ಷ್ಮವಾಗಿ ರಂಗಣ್ಣ ತೋರಿಸಿದನು. ರಂಗಣ್ಣನು ಮುಂದೆ ಮಾತನ್ನು ಆರಂಭಿಸಬೇಕೆಂದಿರುವಷ್ಟರಲ್ಲಿ ಕಾಕಿ ಉಡುಪಿನ ಒಬ್ಬ ಸೇವಕ ಸ್ವಾಮಿ ಸಾಹೇಬರಿಗೆ ಒಂದು ಲಕೋಟೆಯನ್ನು ತಂದಿತ್ತು ತನ್ನ ಪುಸ್ತಕದಲ್ಲಿ ಸಹಿಹಾಕಿಸಿಕೊಂಡು ಹೊರಟು ಹೋದ.

ಲಕೋಟೆಯನ್ನು ಒಡೆದು ಓದುತ್ತ ಓದುತ್ತ ಸ್ವಾಮಿ ಮುಖ ಮಂದಹಸಿತವಾಯಿತು. ಒಂದು ತೆರನ ತೃಪ್ತಿಯು ವೈಯ್ಯಾರ ಅವನ

ದೇಹವನ್ನು ಅಲುಗಿಸಿತು.

"ನಾಳೆ. ನಿಮ್ಮನ್ನು ಕಾಣುವುದಿಲ್ಲ ಪ್ಯಾಲ್ಸ್. (Pals) ಒಂದು ಮುಖ್ಯವಾದ ಮೀಟಿಂಗ್ ನಾಳೆಗೇ ನಿಶ್ಚಯವಾಗಿ ಹೋಗಿದೆ."

"ಯಾವುದು?" ಎಂದು ವಾಸು ಕೇಳಿದ.

"ನೀವೇ ನೋಡಿಕೊಳ್ಳಿ" ಎಂದು ವಾಸುವಿನ ಕೈಗಿತ್ತ ಕಾಗದವನ್ನು ಇಬ್ಬರೂ ಒದಿಕೊಂಡು ಆಶ್ಚರ್ಯಚಕಿತರಾದರು. ರಂಗಣ್ಣನಂತೂ ವಿಸ್ಮೃತಿಯಿಂದ ಆವಾಕ್ಕಾದ.

"ಯಾಕೆ ರಂಗಣ್ಣ ಸುಮ್ಮನಾದೆ."

"ಯಾಕೂ ಇಲ್ಲ. ಈ ಸಂಸ್ಥೆಗೂ ನೀನೇನೆ ಗತಿ. ಈ ಊರಿನಲ್ಲಿ ಇನ್ನು ಯಾರೂ ಇಲ್ಲವೇ ದಿಕ್ಕು ಎಂದು ಯೋಚಿಸುತ್ತಿದ್ದೆ."

"ಸ್ತ್ರೀಸಂರಕ್ಷಣೆಯ ವಿಚಾರ ನನಗಿಂತಲೂ ಹೆಚ್ಚು ಬಲ್ಲವರು ಯಾರಿದ್ದಾರೆ ಹೇಳು. ಅದಕ್ಕೋಸ್ಕರವೇ ನನ್ನ ಆರಿಸಿಕೊಂಡಿದ್ದಾರೆ ಕಮಿಟೀಗೆ."

"ಸರಿ. ಇನ್ನು ಸಾರ್ವಜನಿಕ ಸಂಸ್ಥೆಗಳನ್ನು ಶುದ್ಧೀಕರಿಸುವ ಕ್ರಿಯೆಯನ್ನು ಯಾರಾದರೂ ಕೈಗೊಳ್ಳಬೇಕೆಂದು ಕಾಣುತ್ತದೆ."

"ಅದೂ ನಡೆಯಲಿ. ಅದಕ್ಕೂ ನನ್ನ ಸಹಕಾರವಿದೆ" ಎಂದು ನಗುತ್ತಾ ಸ್ವಾಮಿ ನುಡಿಯಲು ಮರುಮಾತನಾಡದೆ ರಂಗಣ್ಣ "ಬರುತ್ತೇನಪ್ಪಾ. ಹೊತ್ತಾಯಿತು. ಇನ್ನು ಮನೇ ತಾಪತ್ರಯ ಅಷ್ಟು ನೋಡೋಣ. ನಿಂಗೇನು ರಾಜ" ಎಂದು ನಗುತ್ತಾ ನುಡಿದು ವಾಸುವಿನೊಂದಿಗೆ ಹೊರಟು ಹೋದನು.

ವಾಸು, ರಂಗಣ್ಣಾ ಸದ್ಯಕ್ಕೆ ಹೋದಾರೆ ಎಂದು ಹೊರಬಾಗಿಲಿನಲ್ಲಿ ಕಾದಿದ್ದ ರಾಮಕೃಷ್ಣಯ್ಯ ಬಂದು ಕೈಮುಗಿದು ತನ್ನ ಧಣಿಯ ಮುಂದೆ ನಿಂತ

"ಏನು ರಾಮಕೃಷ್ಣಪ್ಪನೋರೇ...."

"ಏನೂಯಿಲ್ಲ........ಹೀಗೆ......ಕೊಂಚ ಹಳ್ಳೀಕಡೆ ಹೋಗಿ ಬರಬೇಕಾಗಿತ್ತು."

"ಎಷ್ಟು ದಿವಸವಾಗುತ್ತೆ ಹಿಂತಿರುಗಿ ಬರೋದು."

"ಬೇಗನೇ ಬಂದು ಬಿಡುತ್ತೇನೆ—ನಾಲ್ಕೈದು ದಿವಸಗಳೊಳಗಾಗಿ. ಸುಗ್ಗೀಕಾಲ. ಈಗ ಸ್ವಲ್ಪ ಹೋಗಿ ಅಲ್ಲಿ ನಿಲ್ಲದಿದ್ದರೆ ಬರೋ ಮೂರು ಕಾಳು

ದವಸವನ್ನೂ ಅವರೇ ತಿಂದುಕೊಂಡು ಬಿಡುತ್ತಾರೆ. ಅದಕ್ಕೋಸ್ಕರ.... "

" ಸರಿ ಹೋಗಿ ಬನ್ನಿ. ಆದರೆ ಆಫೀಸಿನ ಕೆಲಸ. "

" ಎಲ್ಲಾ ಮಾಡಿಟ್ಟು ಹೋಗುತ್ತೇನೆ. ವಾಸುದೇವರಾಯರ ಆಫೀಸಿನ ಕ್ಲಾರ್ಕಿಗೂ ಹೇಳಿದ್ದೇನೆ, ಅವನು ಬಂದು ನೋಡಿಕೊಳ್ಳುತ್ತಾನೆ. "

" ಸರಿ ಹಾಗಾದರೆ. ಖರ್ಚಿಗೇನಾದರೂ ಬೇಕೋ ? "

" ಹೂ, ಬೇಕಾಗಿತ್ತು. "

ಸ್ವಾಮಿ ಧಾರಾಳವಾಗಿ ಇಪ್ಪತ್ತು ರೂಪಾಯಿಗಳನ್ನಿತ್ತು.

" ಆದಷ್ಟು ಬೇಗ ಬಂದು ಬಿಡಿ. ಒಬ್ಬರೇ ತಾನೇ ಹೋಗುವುದು.... " ರಾಮಕೃಷ್ಣಯ್ಯನಿಗೆ ಏನೂ ತೋಚದಂತಾಯಿತು. ಸ್ವಲ್ಪ ಹೊತ್ತು ಆಲೋಚಿಸಿ.

" ಅವಳನ್ನೂ ಕರೆದುಕೊಂಡು ಹೋಗಬೇಕೆಂದಿದ್ದೆ.... "

" ಊಹೂಹು ! ಅದು ಖಂಡಿತವಾಗಿಯೂ ಆಗುವುದಿಲ್ಲ. ಆ ಪಕ್ಷಕ್ಕೆ ನೀವೂ ಹೋಗಬೇಡಿ. "

" ತಾವು ಹೇಗೆ ಅಪ್ಪಣೆ ಕೊಟ್ಟರೆ ಹಾಗೆ ಮಾಡುತ್ತೇನೆ. ನಾನೊಬ್ಬನೇ ಹೋಗಿ ಬರುತ್ತೇನೆ. "

" ನೀವು ಮನೆಗೆ ಹೋಗುತ್ತಾ ಒಂದಿಷ್ಟು ವೀಳೆದೆಲೆ ತೆಗೆದುಕೊಂಡು ಹೋಗಿ ಬಿಡಿ. ನಾನು ಸ್ಟೇಷನ್ನಿನ ತನಕ ಹೋಗಿ ಬೇಗನೇ ಬಂದು ಬಿಡುತ್ತೇನೆ. "

" ಸ್ಟೇಷನ್ನಿಗೆ ಹೋಗಲೇ ಬೇಕೇನು ? "

" ಹೌದು. ನಿಮಗೇತಕ್ಕೆ ಆ ಮಾತು. "

" ಏತಕ್ಕೂ ಇಲ್ಲ. ಸುಮ್ಮನೆ ಕೇಳಿದೆ. ಜನಾ ಬಾಯಿಗೆ ಬಂದ ಹಾಗೆ ಆಡಿಕೊಳ್ಳುತ್ತಾರೆ. ತಾವು ನಿತ್ಯನಿತ್ಯವೂ ಹೀಗೆ ಸ್ಟೇಷನ್ನಿಗೆ ಹೋಗಿ ಬಂದರೆ.... "

" ನಿಮ್ಮ ಕೆಲಸ ನೀವು ನೋಡಿಕೊಂಡು ಸುಮ್ಮನಿರಬೇಕು ನೋಡಿ. ಈ ಅಧಿಕಪ್ರಸಂಗಕ್ಕೆಲ್ಲಾ ಬಾಯಿ ಹಾಕಬಾರದು. ನನ್ನ ಕಾಸು—ನನ್ನ ಹೆಂಡ—ಯಾರಿಗೇನು ಅದರಿಂದ ನಷ್ಟ. ಕೆಟ್ಟುಹೋದರೆ ನನ್ನ ಹೆಸರು ತಾನೆ. ಕೈಯಲ್ಲಿ ನಾಲ್ಕು ಕಾಸು ಝಣಝಣ ಎಂದು ಓಡಿಯಾಡುವ ತನಕ ಎಲ್ಲಾರ

ಹೆಸರೂ ಚೆನ್ನಾಗಿಯೇ ಇರತ್ತೆ ನೋಡಿ. ಅದು ನಿಂತುಹೋದರೆ ತಾನೆ ಎಲ್ಲಾ ಕೆಟ್ಟುಹೋಗುವುದು."

"ಸರಿ ಸ್ವಾಮಿ. ಜನಗಳ ಬಾಯಿಗೆ ಈ ಮಾತು ಬೀಳುತ್ತಾ ಕಕ್ಷಿಗಾರರು ಬರುವುದು ನಿಂತೇ ಹೋಗುತ್ತೆ. ಮೊದಲಿಗೆ ಈಗ್ಗೆ ವರಮಾನ ಎಷ್ಟೋ ಕಮ್ಮಿಯಾಗಿದೆ. ಸಿದ್ದಾಪುರದ ಕೇಸು ಕೆಟ್ಟುಹೋದಾರ್ಭ್ಯನಿಂದ ನಮ್ಮ ಆಫೀಸು ಕೊಂಚ ಕಷ್ಟಕ್ಕೆ ಸಿಕ್ಕಿಕೊಂಡಿದೆ. ಕೇಸು ತೆಗೆದುಕೊಂಡ ಮೇಲೆ ಅದರ ಕೆಲಸ ಸರಿಯಾಗಿ ಮಾಡದೆ ಇದ್ದರೆ ದುಡ್ಡುಕೊಟ್ಟ ಕಕ್ಷಿಗಾರರು ಸುಮ್ಮನೆ ಬಿಡುತ್ತಾರೆಯೇ ಸ್ವಾಮಿ."

"ಹಾಗೆಯೇ ಮಾಡೋಣ. ಈಗ ಬಿಡಿ. ನನಗೆ ಹೊತ್ತಾಯಿತು. ನೀವೆಲ್ಲಾ ಊಟಮಾಡಿಬಿಟ್ಟಿರಿ. ನಾನು ಊಟಮಾಡುವುದು ಅಷ್ಟು ಖಂಡಿತವಿಲ್ಲ. ಅವಳು ಮಾತ್ರ ರೂಮಿನಲ್ಲಿಯೇ ಇರಲಿ—ಮೀಟೀದೆಲೆ ಮರೆಯಬೇಡಿ."

ಎಂದು ಹೇಳುತ್ತಾ ಮತ್ತೊಂದು ಸಿಗಾರನ್ನು ಹಚ್ಚಿಕೊಂಡು ರೈಲ್ವೆಯ ಸ್ಟೇಷನ್ನಿನ ಹಾದಿಯನ್ನು ಹಿಡಿದ. ರಾಮಕೃಷ್ಣಯ್ಯ ಸಿಂಬಿಯನ್ನು ಸುತ್ತಿಕೊಂಡು, ನೀಳನಾದ ತನ್ನ ಮುಖವನ್ನು ಕರವಸ್ತ್ರದಿಂದ ಒರಸಿಕೊಳ್ಳುತ್ತಾ ಆಫೀಸಿನ ಬೀಗ ಹಾಡುಕಲಾರಂಭಿಸಿದ.

೫

"ಏನು ರಾಮಕ್ಕಾ, ಕುಳಿತುಬಿಟ್ಟೆ."

"ಇನ್ನೇನು ಮಾಡಲಮ್ಮ. ಹೊಟ್ಟೇತುಂಬ ಅನ್ನ ಹಾಕುತ್ತೀರಿ. ಕೆಲಸ ಮಾಡುತ್ತೇನೆಂದರೆ ಬೇಡವೆಂದು ಕೋಪಮಾಡಿಕೊಳ್ಳುತ್ತೀರಿ. ಇನ್ನೇನು ಮಾಡಲಿ. ಏನೋ ಗೊಣಗಿಕೊಳ್ಳುತ್ತಾ ಕುಳಿತೆ."

"ಗೊಣಗಿಕೊಳ್ಳೋದನ್ನು ಗಟ್ಟಿಯಾಗಿಯೇ ಹೇಳು."

"ಸರಿ ಬಿಡಮ್ಮ. ರಂಗನ ಮುಂದೆ ಸಿಂಗನೇ ಅಂದ ಹಾಗೆ ನಿಮ್ಮ ಮುಂದೆ ನಾನು ಹಾಡುವುದೇ? ನಮ್ಮ ಹಾಡುಗಳೇನು?—ಹಸೆಗೆ ಕರೆದದ್ದು....ಉರುಟಣೆ ಮಾಡಿದ್ದು—ಆರತಿ ಎತ್ತಿದ್ದು....ಒಂದು ಲಾಲಿ, ಒಂದು ಜೋಗುಳ ಇವೇ ತಾನೇ. ಏನು ಕಂಠ ತಾಯಿ ನಿಮ್ಮದು. ನಿನ್ನೆ ರಾತ್ರಿ ತಂಬೂರಿ ಮೀಟಿಕೊಂಡು ನೀವು ಹಾಡುತ್ತಾ ಇದ್ದದ್ದು ಜ್ಞಾಪಿಸಿಕೊಂಡರೆ ಸಾಕ್ಷಾತ್ ಸರಸ್ವತಿಯನ್ನೇ ಕಂಡ ಹಾಗೆ ಆಗುತ್ತದೆ. ಮುಖದಲ್ಲಿ ಆಗ ಏನು

ತೇಜಸ್ಸು—ಏನು ಕಳೆ!"

"ಹೌದು ರಾಮುಕ್ಕಾ, ಭಟ್ಟರೂ ಒಂದೊಂದು ಸಲ ಅನ್ನುತ್ತಾರೆ ಆ ಮಾತನ್ನ. ನಾನು ಹಾಡುತ್ತ ಕುಳಿತರೆ ಅವರ ಮುಂದೆ ಸಾಕ್ಷಾತ್ ಸರಸ್ವತಿಯೇ ವೀಣೆ ಹಿಡಿದು ಕುಳಿತ ಹಾಗಾಗುತ್ತದಂತೆ. ಭಟ್ಟರ ಬಾಯಲ್ಲಿ ಇಂತಹ ಮಾತುಗಳು ಬರುವುದು ಬಹಳ ಅಪರೂಪ."

"ಹಾಗಾದರೇನು ಅವರು ಅಷ್ಟು ವಿದ್ಯಾವಂತರೇ"

"ನನ್ನ ಹರಕು—ಮುರಕು ವಿದ್ಯಾ ಸರಿಮಾಡಿಕೊಟ್ಟವರೇ ಅವರು. ಈ ಊರಿನಲ್ಲಿ ಒಬ್ಬರು ಡಾಕ್ಟರ ಮನೆಯಲ್ಲಿ ಅವರ ಮಗಳ ಮದುವೆಯಾಯಿತು. ಅಲ್ಲಿ ಭಟ್ಟರದೇ ಪೌರೋಹಿತ್ಯ ನಡೆದಿತ್ತು. ನನ್ನ ಸಂಗೀತ ಕಛೇರಿ ಇಡಿಸಿದ್ದರು. ನಾನು ದೇವಗಾಂಧಾರಿ ಹಾಡುತ್ತಿದ್ದಾಗ ಮೆಲ್ಲನೆ ಸುಖಕ್ಕೋಸ್ಕರ ಹಿಂದೂಸ್ಥಾನಿ ಕಾಪಿ ಕಡೆ ತೇಲಿದೆ. ಎದುರಿಗಿದ್ದ ಭಟ್ಟರು 'ಹೂಂ' ಕರಿಸಿ 'ಉಹೂ! ಅವೆಲ್ಲಾ ಆಗದು. ಇದು ವಿದ್ವತ್ಸಭೆ. ಇಲ್ಲಿ ಶುದ್ಧವಾಗಿ ಹಾಡಬೇಕು' ಎಂದು ಘರ್ಜಿಸಿದರು. ನಾನು ಅಲ್ಲೇ ಅವರಿಗೆ ಅಡ್ಡಬಿದ್ದು ಅವರ ಹತ್ತಿರದಲ್ಲಿಯೇ ಮುಂದಿನ ವ್ಯಾಸಂಗ ನಡೆಸಿದೆ. ಅಂತಹ ಜ್ಞಾನ, ಅಂತಹ ಪಾಂಡಿತ್ಯ ನಮ್ಮ ದೇಶದಲ್ಲಿಯೇ ದೊರಕುವುದಿಲ್ಲಮ್ಮ."

"ಹಾಗೇನು? ಇರಬಹುದು ತಾಯೀ. ಯಾವ ಹುತ್ತದಲ್ಲಿ ಯಾವ ಹಾವಿದೆಯೋ ತಿಳಿದವರು ಯಾರು. (ಭಟ್ಟರ ದಯದಿಂದ ನಮ್ಮ ಸುಂದರೂ ನಿಮ್ಮ ಹಾಗೆ ಹಾಡುವ ಹಾಗಾದರೆ ಎಷ್ಟು ಚೆನ್ನಾಗಿರುತ್ತದೆ.")

"ನನ್ನ ಹಾಗೆ ಯಾಕೆ ರಾಮುಕ್ಕ. (ನನಗಿಂತಲೂ ಹೆಚ್ಚಾಗಿ ಆಗುತ್ತಾಳೆ/ ಈ ಒಂದು ವರ್ಷಕ್ಕಾಗಲೇ ಮೂವತ್ತು ಕೀರ್ತನೆ ಮೇಲೆ ಅವಳಿಗೆ ಪಾಟವಾಗಿದೆ. ಸ್ವಬುದ್ಧಿಯಿಂದ ರಾಗ ಹಾಡುವ ಮಟ್ಟಿಗೆ ಆಗಿದೆ. ತಾಳ ಇನ್ನೂ ಬಿಗಿಯಿಲ್ಲ. ಅದೇನು (ನಮ್ಮ ವೆಂಕಟಮುನಿ ಜತೆ ಒಂದು ಆರು ತಿಂಗಳು ನುರುಗಿದರೆ ಯಾವ ಪಕ್ಕವಾದ್ಯಗಾರರನ್ನು ಬೇಕಾದರೂ ಬಲಿಹಾಕಿ ಬಿಡುತ್ತಾಳೆ." )

"ನಿಮ್ಮ ಉಪಕಾರ ಜನ್ಮಜನ್ಮಕ್ಕೂ ತೀರಿಸುವುದಕ್ಕಾಗುವುದಿಲ್ಲ ತಾಯೀ."

"ನಾನು ಬರುತ್ತೇನೆ ರಾಮುಕ್ಕಾ, ರಾತ್ರೀಗೆ ಯಾರೋ ಸಂಗೀತ ಕೇಳು

ವುದಕ್ಕೆ ಬರುತ್ತಾರಂತೆ. ಸ್ವಲ್ಪ ಕಾಫಿ ಟೀ ವ್ಯವಸ್ಥೆ ನೋಡಿಕೊಳ್ಳುತ್ತೇನೆ. ಪುಟ್ಟು ಎಲ್ಲಿ ಬೆಳಗ್ಗೆಯಿಂದಲೂ ಕಾಣಲೇ ಇಲ್ಲ "

"ಸ್ಕೂಲಿಗೆ ಹೋಗಿರಬಹುದು."

"ಏನು ಸ್ಕೂಲೋ. ಏನು ಕಲಿಯೋದೋ ಅಲ್ಲಿ. ಅವನು ಬರುತ್ತಲೂ ನನ್ನ ಹತ್ತಿರ ಕಳುಹಿಸು ರಾಮಕ್ಕಾ."

ಎಂದು ಹೇಳಿ ಅವಸರದಿಂದ ಹೊರಟು ಹೋದಳು. ರಾಮಕ್ಕ ತನ್ನ ಷ್ಟಕ್ಕೆ ತಾನೇ ಕುರುಕಿಕೊಳ್ಳುತ್ತಾ, ಸೊಂಟಕ್ಕೆ ಸಿಕ್ಕಿದ ಎಲೆಯಡಿಕೆಯ ಚೀಲ ವನ್ನು ತೆಗೆದು ವೀಳ್ಯವನ್ನು ಹಾಕಿಕೊಳ್ಳಲಾರಂಭಿಸಿದಳು. ರಾಮಕ್ಕ ಸುಮ್ಮನೆ ಒಬ್ಬಳೇ ಕುಳಿತಿರುವುದನ್ನು ಕಂಡು ಸುಂದರೂ ಹತ್ತಿರ ಬಂದು ಕುಳಿತುಕೊಂಡು ರಾಮಕ್ಕನಿಗೆ ಎಲೆಯನ್ನು ಮಡಿಸಿಕೊಡಲಾರಂಭಿಸಿದಳು. ಸುಂದರನನ್ನು ಎವೆ ಯಿಕ್ಕದೆ ದಿಟ್ಟಿಸಿ ನೋಡಿ

"ಈಗಾಗಲೇ ಹೇಗೆ ಕಾಣುತ್ತೀಯೆ ತಾಯೀ. ಗಜಗೌರಿ ಕಂಡಹಾಗೆ. ಜೊಂತೆ ಕಟ್ಟಿಹೋಗಿದ್ದ ನಿನ್ನ ತಲೆ—ಮಾಸಲು ಚಿಂದಿಯ ಬಟ್ಟೆಯನ್ನು ನೋಡುತ್ತಿದ್ದಾಗೆಲ್ಲಾ ನನ್ನ ಹೊಟ್ಟೆ ಉರಿದುಹೋಗುತ್ತಿತ್ತು. ಈಗ......."

"ಆದರೆ ಆಗಲೇ ಚೆನ್ನಾಗಿತ್ತು ಅಜ್ಜೀ.......ಯಾವಗಲೂ ನೀನು— ನಾನು—ಪುಟ್ಟೂ. ಈಗ ನಿನ್ನ ಪುಟ್ಟೂನ ನೋಡುವುದಕ್ಕೇ ಕಷ್ಟವಾಗಿ ಬಿಡುತ್ತದೆ. ಬೆಳಗ್ಗೆಯಿಂದ ಸಂಜೆಯುವರೆಗೂ 'ಸರಿಗಮ ಪದನಿಸ' ಒರಲೀ ಒರಲೀ ನನ್ನ ಗಂಟಲೆಲ್ಲಾ ಒಣಗಿಹೋಗಿದೆ. 'ಥಕಥೈಯ್ಯಾ' ಕುಣಿದೂ ಕುಣಿದೂ ಕಾಲುಗಳೆರಡೂ ಬಿದ್ದೇ ಹೋಗಿವೆ."

"ಬೇಜಾರು ಮಾಡಿಕೊಳ್ಳಬಾರದು ಚಿನ್ನಾ. ಈಗ ಸ್ವಲ್ಪ ಕಷ್ಟಪಟ್ಟರೇ ಅಲ್ಲವೇ ನಾಳೆ ಸುಖವಾಗಿರುವುದು. ಚಂದ್ರಮ್ಮ ಈಗತಾನೆ ಹೇಳುತ್ತಿದ್ದರು.... ಇನ್ನು ಕೆಲವು ದಿವಸಕ್ಕೆ ಸಂಗೀತದಲ್ಲಿ ನೀನು ಅವರನ್ನೂ ಮೀರಿಸುತ್ತೀ ಯೆಂದು!"

"ಏನು ಮೀರಿಸುವುದೋ"

ಎಂದು ಬೇಸರದ ದನಿಯಲ್ಲಿ ನುಡಿದು, ಪುಟ್ಟುವಿನ ಬರುವಿಗೆ ಕಾಯುತ್ತ ಕುಳಿತಳು. ಬಾಲ್ಯವನ್ನು ಹೇಗೆ ಹೇಗೋ ಕಳೆದು ಈಗ ಒಮ್ಮೆಲೇ ತಾರುಣ್ಯದ ಪೂರ್ಣಜೀವನಕ್ಕೆ ಸುಂದರನನ್ನು ವಿಧಿ ಹಾರಿಸುವುದರಲ್ಲಿತ್ತು. ಇದನ್ನು

ಪ್ರತಿಭಟಿಸಿ ಪುಟ್ಟು ಎಳೆತನದ ಪವಿತ್ರಜೀವನಕ್ಕೆ ಎಳೆಯುತ್ತಿದ್ದ. ಪುಟ್ಟುವಿನೊಂದಿಗೆ ಚಂಡನ್ನೋ, ಕುಂಟುವಬಿಲ್ಲೆ ಆಟವನ್ನೋ, ಚೌಕಭಾರವನ್ನೊ ಆಡುವುದೇ ಅವಳ ಶ್ರಮಭರಿತ ಜೀವನಕ್ಕಿದ್ದ ತುಸು ಸಮಾಧಾನ. ಒಂದೊಂದು ದಿವಸ ಅದಕ್ಕೂ ವಿಘ್ನಬರುತ್ತಿತ್ತು. ತಾಳ ಪಾಠಕ್ಕೆ ವೆಂಕಟಮುನಿಯಯ್ಯ ನಿರ್ದಯೆಯಿಂದ ಎಳೆದೊಯ್ಯುತ್ತಿದ್ದ. ಈ ಉಪಾಧಿಗಳಿಲ್ಲದ ದಿವಸ ಆಟಕ್ಕೆ ಪುಟ್ಟು ಸಿಕ್ಕಿದನೆಂದರೆ ಅವಳ ಹಿಗ್ಗು ಹಿಡಿಸದು.

ಪುಟ್ಟುವೇನೋ ಹೊತ್ತಿಗೆ ಸರಿಯಾಗಿಯೇ ಬಂದ. ಆದರೆ ಅವನ ಮುಖದಲ್ಲಿ ಕಳೆಯಿರಲಿಲ್ಲ. ಅತ್ತು ಅತ್ತು ಕಣ್ಣುಗಳೆರಡೂ ಕೆಂಪಗೆ ಕಾದ ಕೆಂಡದಂತಾಗಿದ್ದವು. ರಾಮಕ್ಕ, ಸುಂದರನನ್ನು ಕಂಡ ಕ್ಷಣವೇ ಅವನ ದುಃಖ ನೂರ್ಮಡಿಸಿ ಬಂದು ರಾಮಕ್ಕನ ಕೊರಳನ್ನಪ್ಪಿಕೊಂಡು ಗಟ್ಟಿಯಾಗಿ ಅಳಲುಪಕ್ರಮಿಸಿದ. ಅಳುವಿನ ಆವೇಗ ಕೊಂಚ ಕಡಮೆಯಾದ ಮೇಲೆ ರಾಮಕ್ಕನು ಮೃದುವಾಗಿ ನೇವರಿಸುತ್ತಾ

"ಏತಕ್ಕೆ ಕಂದಾ ಅಳು, ಯಾರು ಏನಂದರು ಅಪ್ಪನ್ನ. ಮೇಷ್ಟರು ಹೊಡೆದು ಬಯ್ದು ಏನಾದರೂ ಮಾಡಿದರೇನು ?"

"ಇಲ್ಲ ಅಜ್ಜಿ. ಆದರೆ....ಆ....ದ....ರೆ"

ಎಂದು ಮತ್ತೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ರಾಮಕ್ಕನು ಸಮಾಧಾನ ಮಾಡುತ್ತಾ

"ಏನಾಯಿತು ಹೇಳು ಪುಟ್ಟೂ, ಸುಮ್ಮನೆ ಅಳಬಾರದಪ್ಪಾ"

"ಹುಡುಗರೆಲ್ಲಾ ನನ್ನ ಸೂಳೇಮಗ—ಸೂಳೇಮಗ ಎಂದು ಬಯ್ಯುತ್ತಾರೆ ಅಜ್ಜಿ. ಅದಕ್ಕೇ ಅಳು ಬಂತು."

ಎಂದು ಬಿಕ್ಕಳಿಸಿಕೊಂಡೇ ಹೇಳಿದ. ರಾಮಕ್ಕಾ, ಸುಂದರಾ ಇಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ರಾಮಕ್ಕ ಪುಟ್ಟುವನ್ನು ಸಂತೈಸುತ್ತಾ

"ಇಷ್ಟೇತಾನೆ. 'ಅಲ್ಲ' ವೆಂದು ಹೇಳಿಬಿಟ್ಟರಾಯಿತು. ಅದಕ್ಕೆ ಏಕೆ ಇಷ್ಟು ಅಳು. ಸುಂದರೂ ಆಗನಿಂದಲೂ ಕಾದಿದ್ದಾಳೆ. ಅವಳ ಜತೆ ಆಡಿಕೋ ಹೋಗು."

ಎಂದು ಇಬ್ಬರನ್ನೂ ಕಳುಹಿಸಿಕೊಟ್ಟು ತಾನು ಚಿಂತಿಸುತ್ತಾ ಕುಳಿತಳು.

ಮನಸ್ಸಿನಲ್ಲಿ ಬಗೆಬಗೆಯ ಪ್ರಶ್ನೆಗಳು—ಬಗೆಬಗೆಯ ಸಮಸ್ಯೆಗಳು. ಯಾವ ದಕ್ಕೂ ಸಮಾಧಾನ ಹೇಳಲಾಗದ ಅಸಹಾಯಕತೆಯಿಂದ ಕಣ್ಣೀರ್ಗರೆಯುತ್ತಾ ತನ್ನ ಪ್ರೀತಿಯ ಜೋಗುಳವನ್ನು ಹಾಡಿಕೊಂಡು ಕುಳಿತಳು.

೬

ಸುಂದರವಾದ ಕೋಣೆ. ರುಚಿಕರವಾಗಿ ಅಲಂಕೃತವಾಗಿತ್ತು. ಕಿಟಿಕಿ ಬಾಗಿಲುಗಳಿಗೆ ಮಣಿ ತೋರಣಗಳು. ನೀಲಿರಂಗಿನ ಆವರಣಗಳು. ಗೋಡೆ ಮೇಲೆ ಅಂದವಾದ ಕೆಲವು ಆಧುನಿಕ ಚಿತ್ರಶಿಲ್ಪಿಗಳ ಕೃತಿಗಳು. ಅವುಗಳಲ್ಲಿ ಮುಜಂದಾರನ 'ಗುರಿ' ಯೂ ಒಂದು. 'ತುಂಬು ಸೌಂದರ್ಯ ಲಾವಣ್ಯ ಮಯಿಯಾದ ಒಬ್ಬ ರೂಪವತಿ ತನ್ನ ಕೈಗೆ ದೊರಕಿದ ತಲೆ ಬುರುಡೆಯನ್ನು ನೋಡುತ್ತ ಯೋಚಿಸುತ್ತ ಕುಳಿತ್ತಿದ್ದಾಳೆ. ಅವಳ ಮನಸ್ಸಿನಲ್ಲಿ ಏನುಏನೋ ಕಲ್ಪನೆಗಳು. ತನ್ನ ಒಳಗಿರುವ ರೂಪ ಇದೆಯೋ? ಈ ಸೌಂದರ್ಯವೆಲ್ಲಾ ಹೊರಹೊದಿಕೆಯಲ್ಲದೆ ಬೇರೆಯೇನು?—ಇಂದು ಇಂತಹ ರೂಪವತಿಯಾಗಿರುವ ನಾನು ನಾಳೆ ಈ ಅಸ್ಥಿರುಂಡದಂತೆ ಹೇಸಿಗೆಯ ಅಸಹ್ಯ ಸ್ವರೂಪವನ್ನು ತಾಳು ವೆನೇ—ನಾನೂ ತಾಳುವೆನೇ?' ಎಂದು ಆಕೆಯ ಮನಸ್ಸಿನಲ್ಲಿ ಪ್ರಶ್ನಮಾಲೆಯೇ ಏಳುತ್ತಿದೆ. ಅವರ ಎದುರಿಗೆ ಮಹಾತ್ಮ ಯೇಸುವಿನ 'ಪವಿತ್ರ ಹೃದಯ' ದ ಚಿತ್ರ. ಯೇಸುವಿನ ಕಣ್ಣುಗಳು ಲೋಕವನ್ನೇ ಕರೆಯುತ್ತಾ ಹೃದಯದ ಕಡೆಗೆ ತೋರುತ್ತಿವೆ. ಎಲ್ಲ ಸುಖ, ಶಾಂತಿಗಳ ಉಗಮಸ್ಥಾನ 'ಮಾನವ ಹೃದಯ' ವೆಂದೇ ಆ ಚಿತ್ರ ಸಾರುತ್ತಿದೆ. ಮತ್ತೊಂದು ಎಡೆಯಲ್ಲಿ ಜಗತ್ತಿನ ಕಠೋರ ವೃತ್ತಿಗೆ ನೊಂದು ಬೆಂದ ಜರ್ಮನ್ ಸಂಗೀತಗಾರ ಬೀಥೋವನ್ನನ ಉಗ್ರಚಿತ್ರ. ಕೆದರಿದ ತಲೆ, ಉಗ್ರವಾದ ಕಣ್ಣುಗಳು, ಒಂದು ಪಕ್ಕಕ್ಕೆ ಜಾರಿದ ತಿರಸ್ಕಾರಸೂಚಕ ತುಟಿಗಳು—ಇವು—ಎದುರಿಗಿದ್ದ ಪ್ರಮೋದ ಕುಮಾರ ಚಟರ್ಜಿಯ 'ಧ್ಯಾನಿಶಿವ' ನನ್ನು ಅಣಕಿಸುತ್ತಿದ್ದವು. ಲೋಕದ ಹಿತಕ್ಕಾಗಿ ಭಯಂಕರ ವಿಷವನ್ನು ಪಾನಮಾಡಿ ಧ್ಯಾನದಲ್ಲಿ ಪರಶಿವ ವಿಮಗ್ನ ನಾಗಿ ಕುಳಿತುಬಿಟ್ಟಿದ್ದಾನೆ. ಲೋಕದ ಹಿತಕ್ಕೇ ದುಡಿದು ದೇಹವನ್ನು ಸವೆಸಿದ ಬೀಥೊವನ್ನನು ತನ್ನ ದೃಢನಂಬಿಕೆಯನ್ನು ಕಳೆದುಕೊಂಡು ಮಾನವದ್ವೇಷಿ ಯಾಗಿದ್ದಾನೆ—ಪರಶಿವ ನಂಬಿಕೆಯನ್ನು ಹೆಚ್ಚಿಸಿಕೊಂಡು ಲೋಕದ ಅನಂತ ಕಲ್ಯಾಣವನ್ನು ಬಯಸುತ್ತಾ ಧ್ಯಾನಮಗ್ನನಾಗಿದ್ದಾನೆ. ಆ ನಿಶ್ಶಬ್ದ ಹುಣ್ಣಿ

ಮೆಯ ಇರುಳಿನಲ್ಲಿ ಸುಂದರಿ, ಬಿಥೋವನ್, ಪರಶಿವ, ಯೇಸು ಇವರುಗಳು ಜಗತ್ತಿನ ನೀತಿ ನಡತೆಯ ಬಗ್ಗೆ ತಮ್ಮತಮ್ಮಲ್ಲಿಯೇ ವಾದಕ್ಕೆ ಆರಂಭಿಸಿದಂತಿತ್ತು. ನಾಲ್ವರೂ ದೇಹವನ್ನು ಜಗತ್ತಿನ ಸುಖಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಸವೆಸಿದವರು; ನಾಲ್ವರೂ ಲೋಕದ ಕೃತಘ್ನತೆಯಿಂದ ನೋವಿಗೆ ಈಡಾದವರು—ಆದರೆ ಅವರಲ್ಲಿಯೇ ಜಗತ್ತಿನ ಹಿತಸಾಧನೆಯ ಬಗ್ಗೆ ಪ್ರಬಲವಾದ ಭಿನ್ನಾಭಿಪ್ರಾಯ ಜನಿಸಿ ಹುಟ್ಟಿಬಿಟ್ಟಿತ್ತು.

"ಲೋಕದ ಹಿತಸಾಧನೆಯಾದರೇನು, ಬಿಟ್ಟರೇನು—ನಮ್ಮ ಸುಖವನ್ನು ನಾವು ಸಂಪಾದಿಸಿಕೊಳ್ಳಬೇಕು ಇಂದು ಲೋಕಪೂಜ್ಯಳು—ನಾಳೆ ಈ ಅಸ್ಥಿರುಂಡದಂತೆ ಒಂದು ಎಲುಬಿನ ಗೂಡು—ಕಸದಕೂಪ. ಇರುವತನಕ ಸುಖಪಡಬೇಕು—ನಾಳಿನ ಯೋಚನೆ ನಾಳೆಗೆ" ಎಂದು ಸುಂದರಿಯ ವಾದ.

"ನಾನೆಂತಹ ಮೂಢ. ಲೋಕ ಲೋಕವೆಂದು ನನ್ನ ಬಾಳನ್ನು ಹಾಳುಮಾಡಿಕೊಂಡು ಕಣ್ಣಿಗೆ ಕಾಣದ ಗಾನದೇವಿಯ ಉಪಾಸನೆಗಾರಂಭಿಸಿ ಕಣ್ಣಿಗೆ ಕಾಣುತ್ತಿದ್ದ—ಒಲಿದು ಬರುತ್ತಿದ್ದ—ದೇವಿಯರನ್ನು ನಿರ್ಲಕ್ಷಿಸಿ ಸುಖವನ್ನು ಹಾಳುಮಾಡಿಕೊಂಡು ಅಹರ್ನಿಶಿ ಅನಂತ ವೇದನೆಗೆ ಒಳಗಾದೆ. ಲೋಕವು ನನಗೆ ಮಾಡಿದ್ದೇನು ಇರುವತನಕ ಹೊಟ್ಟೆಗೆ ಹಾಕದೆ ಸಾಯಿಸಿಬಿಟ್ಟರು. ಈಗ ಎಲ್ಲಿ ನೋಡಿದರೂ ನನ್ನ ಕವಿತೆಗಳು—ಯಾರ ಬಾಯಲ್ಲಿ ನೋಡಿದರೂ ನನ್ನ ಗೀತೆಗಳು. ನನ್ನ ಹೆಸರಿನಲ್ಲಿ ಎಷ್ಟು ಸಂಸ್ಥೆ, ಎಷ್ಟು ಉತ್ಸವ, ಎಷ್ಟು ಚಿತ್ರ, ಎಷ್ಟು ಶಿಲಾಶಿಲ್ಪ. ಜರ್ಮನಿಯಲ್ಲಿ, ಭಾರತವರ್ಷದಲ್ಲಿ—ಇಲ್ಲಿಯೂ ನನ್ನ ಚಿತ್ರ. ಇದ್ದ ಅಲ್ಪಾಯುವನ್ನು ಲೋಕಸೇವೆಗೆಂದು ಮಿಸಲು ತೆಗೆದಿಟ್ಟು ಬಾಳನ್ನು ಬರಿದು ಮಾಡಿಕೊಂಡ ಮೂಢ ನಾನು" ಎಂದು ಬಿಥೋವನ್ನನ ಕಳಕಳಿಯ ವಾದ.

ಕಂಬನಿ ತುಂಬಿ ಕ್ರಿಸ್ತದೇವ ತನ್ನ ಸಹಜವಾದ ಪ್ರಶಾಂತ, ಅಮೃತವಾಣಿಯಿಂದ

"ಹಾಗಲ್ಲ ಬಿಥೋವನ್. ಲೋಕಸೇವೆಯನ್ನು ನಾವು ಮಾಡುವುದು ನಾವು ಉದ್ಧಾರವಾಗಬೇಕೆಂಬ ಸ್ವಾರ್ಥದಿಂದಲ್ಲ. ಸೇವೆಗಾಗಿಯೇ ಸೇವೆಯನ್ನು ಮಾಡುವುದೇ ಸೇವೆಯ ಧರ್ಮ. ಅರಿಯದೆ ನನ್ನವರೇ ನನ್ನನ್ನು ಶಿಲುಬೆಗೇರಿಸಿದರು—ನನ್ನ ಒಡಹುಟ್ಟಿದವನಂತಿದ್ದ ಜುಡಾಸನು ನನ್ನನ್ನು ಮಾರಿದ—

ಪ್ರೈಲೇಟನೇನು ಪಾಪಿಯೇ ? ಅವನು ನನ್ನ ಪಥೆಗೆ ನೆರವಾದನು. ಆದರೇನು ? ಅಂತಹವನನ್ನು ಸೇವಿಸಿ ಉದ್ಧರಿಸುವುದೇ ನಮ್ಮ ಧರ್ಮ. ಈಕೆಯನ್ನು ನೋಡು....ಎಂತಹ ಸುಂದರಿ. ಜಗತ್ತಿನಿಂದ ಎಷ್ಟು ಸುಖವನ್ನು ಕಸುಕೊಂಡಿದ್ದಾಳೆ. ಆದರೂ ಅವಳಲ್ಲಿ ಎಂತಹ ಅತೃಪ್ತಿ. ಈ ಬಗೆಯ ಸುಖವನ್ನು ಬಯಸುತ್ತ ಬಯಸುತ್ತ ಹೆಚ್ಚುವುದು ಅತೃಪ್ತಿ, ಅಸಂತೋಷ, ಅಶಾಂತಿಯಲ್ಲದೆ ಬೇರೊಂದಿಲ್ಲ. ಅತ್ತ ನೋಡು....ಪರಶಿವನ ಮುಖದ ಮೇಲೆ ಮೂಡಿರುವ ಬೆಳದಿಂಗಳನ್ನು ನೋಡು. ಸ್ಮಶಾನವಾಸಿ, ಫಣಿಗಳಿಂದಲಂಕೃತ, ಗಜಚರ್ಮಾಂಬರಧಾರಿ, ಆದರೂ ಅವನ ಆನಂದ, ಅವನ ಸುಖ, ಬೇರೊಬ್ಬರಿಗೆ ಎಲ್ಲಿಂದ ಬರಬೇಕು. ತ್ಯಾಗಮೂರ್ತಿಯ ಜೀವನದ ಬೆಳದಿಂಗಳು ಭೋಗವೃತ್ತಿಯ ಕಾರಿರುಳಿನಲ್ಲಿ ಎಲ್ಲಿ ಬರಬೇಕು.''

ಎಂದು ಹೇಳುತ್ತಿರುವಂತೆ ಪರಶಿವನು ಬಂದು ಯೇಸುವನ್ನು ಅಪ್ಪಿದ. ಇಬ್ಬರೂ ಸುಂದರಿ, ಬಿಶೋವನ್ನರನ್ನು ಹರಸಿದರು. ಸುಂದರಿ ಬೆಕ್ಕಸ ಬೆರಗಾಗಿ ಪರಶಿವನನ್ನು

"ದೇವಾ, ನೀನು ಸನಾತನಧರ್ಮವಿರೋಧಿ ಕ್ರಿಸ್ತನನ್ನು ಬಂಧುವಂತೆ ಬಾಹುಬಂಧನದಲ್ಲಿ ಬಿಗಿಯುವುದೇ'' ಎಂದು ಪ್ರಶ್ನಿಸಿದಳು. ಅದೇ ಪ್ರಶ್ನೆಯನ್ನು ಬಿಶೋವನ್ನನು ಯೇಸುವನ್ನು ಕೇಳುವುದರಲ್ಲಿದ್ದ. ಪರಶಿವನಸುನಗುತ್ತಾ

"ತಾಯೀ, ನಾನು ಯಾರು, ಯೇಸು ಯಾರು ? ಇಬ್ಬರೂ ಒಂದೇ ಹಿಂದುಗಳಿಗೆ ಯಾವ ಶಕ್ತಿ ಪರಶಿವನಾಗಿ ಗೋಚರಿಸುವುದೋ ಕ್ರಿಸ್ತರಿಗೆ ಅದೇ ಶಕ್ತಿ ಯೇಸುವಾಗಿಯೂ, ಮುಸಲ್ಮಾನರಿಗೆ ಅಲ್ಲಾ ಆಗಿ ಗೋಚರಿಸುವುದು. **ಧರ್ಮವನ್ನು ದೇವರು ಸೃಷ್ಟಿಸುತ್ತಾನೆ. ಮಾನವ ತನ್ನ ಮೌಢ್ಯದಿಂದ ಅದನ್ನು ಒಡೆದೊಡೆದು ಮತಗಳನ್ನಾಗಿಸಿಬಿಡುತ್ತಾನೆ.** ಧರ್ಮಕರ್ತ ಆ ವಿಪರ್ಯಾಸವನ್ನು ಸಹಿಸದೆ ಪ್ರಳಯ ಕೋಪದಿಂದ ಲೋಕವನ್ನು ವಿನಾಶಗೊಳಿಸಿ ಮತ್ತೆ ತನ್ನ ಧಾರ್ಮಿಕ ಕಲ್ಪನೆಗೆ ರೂಪಕೊಡಲೆತ್ನಿಸುತ್ತಾನೆ."

ಎಂದು ಯೋಚಿಸುತ್ತ ಯೋಚಿಸುತ್ತ ಲಲಿತಮ್ಮ ಜಗ್ಗನೆದ್ದು ಗೋಡೆಯ ಮೇಲಿದ್ದ ಚಿತ್ರಪಟಗಳನ್ನು ದಿಟ್ಟಿಸಿ ನೋಡುತ್ತಾ, ಎದುರಿಗೆ ನಿಂತಿದ್ದ ಸ್ವಾಮಿಯನ್ನು ಲಕ್ಷಿಸದೆ ಉದ್ವೇಗದಿಂದ ಕಂಪಿಸಲಾರಂಭಿಸಿದಳು.

"ಏನು ಚಿನ್ನಾ....ಇಷ್ಟು ಹೆದರಿರುವೆ" ಎಂದು ಅಪ್ಪಿ ಸ್ವಾಮಿ ಸಮಾಧಾನಪಡಿಸಲಾರಂಭಿಸಿದ. ಲಲಿತಮ್ಮ ತುಸುತುಸು ಎಚ್ಚರಮಾಡಿಕೊಂಡು ತನ್ನ ಬಳಿಯಲ್ಲಿ ಕುಳಿತಿದ್ದ ಪ್ರಿಯನನ್ನು ನೇವರಿಸಿ, ಅವನು ನಿಜವಾಗಿಯೂ ತನ್ನ ಬಳಿಯಲ್ಲಿಯೇ ಇರುವನೆಂದು ಧೈರ್ಯ ಮಾಡಿಕೊಂಡು

"ಹೀಗೆ ಕುಳಿತುಕೊಂಡು, ನೀವು ಬರುವುದು ಹೊತ್ತಾಗಲು, ಟ್ರೈನನ 'ಅನಂತತೆಯೊಂದಿಗೆ ತಲ್ಲೀನತಾ' ಗ್ರಂಥವನ್ನು ಓದುತ್ತಾ ಕುಳಿತಿದ್ದೆ. ಗ್ರಂಥ ಮನಸ್ಸಿನಲ್ಲಿ ಏನು ಏನೋ ಭಾವಗಳನ್ನು ಏಳಿಸಿತು. ಅವುಗಳನ್ನು ಚಿಂತಿಸುತ್ತಾ ಕುಳಿತಿದ್ದೆ—ಹಾಗೆಯೇ ನಿದ್ದೆ ಹತ್ತಿತು. ವಿಚಿತ್ರವಾದ ಕನಸನ್ನು ಕಾಣಲು ಭಯದಿಂದ ಕಾತುರಗೊಂಡೆ" ಎಂದು ಕನಸನ್ನು ವರ್ಣಿಸಿದಳು. ಸ್ವಾಮಿ ಕನಸಿನ ನೆವಹೂಡಿ ಲಲಿತಮ್ಮ ತನಗೊಂದು 'ಸಂದೇಶ' ವನ್ನಿತ್ತಳೋ, ನಿಜವಾಗಿಯೂ ಸಂಭವಿಸಿದ ಕನಸನ್ನೇ ವರ್ಣಿಸಿದಳೋ ಎಂದು ಆಕೆಯನ್ನು ಮೂರು ನಾಲ್ಕು ಬಾರಿ ದಿಟ್ಟಿಸಿ ದಿಟ್ಟಿಸಿ ನೋಡಿದ. ಕನಸಿನ ಸಂದೇಶ ಅವನ ಮನಸ್ಸಿಗೆ—ನಿರ್ಬಾಧಿತವಾಗಿದ್ದ ಮನಸ್ಸಿಗೆ—ಅನೇಕ ಸಂದೇಹಗಳನ್ನು ತಂದುಹಾಕಿತು. ಅವನ ಬಾಲ್ಯ, ತಾರುಣ್ಯಗಳನ್ನೇ ಜ್ಞಾಪಿಸಿ ಕೊಟ್ಟಿತು—ಇಂದಿನ ಜೀವನದ ಒಂದೊಂದು ನಡೆವಳಿಕೆಗಳನ್ನು ಭಯಂಕರ ಚಿತ್ರಗಳನ್ನಾಗಿ ಮಾರ್ಪಡಿಸಿ ತೋರಿಸಿತು. ಪಾಪ ಪುಣ್ಯ, ತಪ್ಪು ಸರಿ, ನ್ಯಾಯ ಅನ್ಯಾಯ ಕಲ್ಪನೆಗಳನ್ನೆಲ್ಲಾ ಒಂದು ಕೃತಕ ಜೀವನದಲ್ಲಿ ಮುಳುಗಿಸಿ ತನ್ನ ಕಲ್ಪನೆಗೆ—ಅನುಕೂಲಕ್ಕೆ ಹೊಂದಿಕೆಯಾಗುವ ನಡತೆಯನ್ನು ಮುಂದುಮಾಡಿಕೊಂಡು ಜೀವನಯಾತ್ರೆಯನ್ನು ಸಾಗಿಸುತ್ತಿದ್ದ ಸ್ವಾಮಿಯ ಮನಸ್ಸನ್ನು ಮುಳ್ಳು ಕುಟುಕಿದಂತಾಯಿತು.

"ಏತಕ್ಕೆ. ಸುಮ್ಮನಾದಿರಿ. ನಾನು ಕನಸನ್ನು ಹೇಳಿದ್ದು ತಪ್ಪಾಯಿತೇ?"

"ಛೆ! ಛೆ!! ಎಂದಿಗೂ ಇಲ್ಲ. ನಿನ್ನ ಕನಸಿನ ಅರ್ಥವನ್ನೇ ಗ್ರಹಿಸುತ್ತಾ ಸ್ವಲ್ಪ ಹೊತ್ತು ಸುಮ್ಮನಿದ್ದೆ ಅಷ್ಟೇ. ಎಷ್ಟಾದರೂ ಕನಸು ಕನಸೇ ತಾನೇ. ಅದಕ್ಕೇತಕ್ಕೆ ಹೆಚ್ಚು ಯೋಚನೆ."

"ಹಾಗೆಂದರೆ...."

"ಹಾಗೆಂದರೆ ಕನಸು ಸುಳ್ಳು....ಅದನ್ನು ಮರೆತು ಸುಮ್ಮನಿರುವುದು ಎಂದು. ಏನು ಬಹಳ ಯೋಚನೆ ಮಾಡುತ್ತಿದ್ದೀಯಲ್ಲ."

“ಆ ಪಟದ ಸುಂದರಿಯು ಹಾಗಾಗಿದೆ ನನ್ನ ಪಾಡು. ಕೇವಲ ವಿಲಾಸಿನಿಯಾಗಿದ್ದೀನಲ್ಲಾ ಎಂದು ಯೋಚನೆ ಹುಟ್ಟಿದೆ. ಬುದ್ಧದೇವನಿಗೆ ಮೃತ ಶರೀರವನ್ನು ನೋಡಿ ವಿವೇಕ ಹೊಳೆಯಿತಂತೆ....”

“ಹಾಗೆ ಕನಸು ಕಂಡು ನಿನಗೆ ವಿವೇಕ ಹೊಳೆಯಿತಲ್ಲವೇ....ನಿನಗೆ ಹೊಳೆದ ವಿವೇಕವಾದರೂ ಏನು?”

“ಹೆಂಗಸು ಕೇವಲ ವಿಲಾಸಿನಿಯಲ್ಲ. ಅವಳೂ ಮಾನವ ವರ್ಗಕ್ಕೆ ಸೇರಿದ ಒಂದು ಪ್ರಾಣಿ. ತನ್ನ ಮಾನವ್ಯವನ್ನು ಅವಳೂ ಉಳಿಸಿಕೊಳ್ಳಬೇಕೆಂದು.”

“ಇಲ್ಲವೆಂದವರು ಯಾರು? ಪುರುಷರಿಗೆ ಸ್ವಾತಂತ್ರ್ಯವಿರುವಂತೆಯೇ ನಿಮಗೂ....ಅಲ್ಲ....ನಿನಗೂ ಇದೆ. ಸ್ವಾತಂತ್ರ್ಯವಿಲ್ಲದಿದ್ದರೆ ನೀನು ಹೀಗೆ ರಾಮಕೃಷ್ಣಯ್ಯನನ್ನು....” ಎಂದು ಹೇಳುತ್ತಾ ಅಪ್ಪಿ ಮತ್ತೆ ಮತ್ತೆ ಚುಂಬಿಸಿದನು. ಲಲಿತಮ್ಮನ ಮೈಮೇಲೆ ಹಿಂದೆ ಮಲ್ಲಿಕಾಪುಷ್ಪಗಳಂತೆ ಬೀಳುತ್ತಿದ್ದ ಆ ಚುಂಬನಗಳು ಈಗ ಕಾದ ಕಬ್ಬಿಣದ ತುಂಡುಗಳಂತೆ ಬಿದ್ದವು. ಮೆಲ್ಲನೆ ಸ್ವಾಮಿಯ ಹಿಡಿತದಿಂದ ಬಿಡಿಸಿಕೊಂಡು,

“ನಾನು ಯೋಚಿಸುತ್ತಿದ್ದುದು ಆ ಬಗೆಯ ಸ್ವಾತಂತ್ರ್ಯವನ್ನಲ್ಲ. ಒಬ್ಬನನ್ನು ಕೈಹಿಡಿದು, ನಾನಿಂದು ಬೇರೊಬ್ಬನ ಮಡದಿಯಾಗಿದ್ದೇನೆ. ಧರ್ಮಕ್ಕೆ ಸ್ವಸುಖವನ್ನು ಬಲಿಗೊಡುವುದರ ಬದಲು ಸ್ವಸುಖಕ್ಕೆ ಧರ್ಮವನ್ನು ಬಲಿಗೊಟ್ಟಿದ್ದೇನೆ.”

“ನೀನು ಒಪ್ಪದಿದ್ದವನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡಿದುದು ಧರ್ಮವೇನು? ಅಧರ್ಮವಯ ನಡೆವಳಿಕೆಗೆ ಅಧರ್ಮವೇ ತಕ್ಕ ಶಾಸ್ತಿ. ಆದರೆ ಚಿನ್ನಾ, ಪ್ರೇಮಕ್ಕೆ ಧರ್ಮಾಧರ್ಮಗಳ ಕಟ್ಟಿಲ್ಲಿಂದ ಬಂತು.”

“ಪ್ರೇಮ ಹಾಗಾದರೆ ಕೇವಲ ಕಾಮೋಪಭೋಗದಿಂದಲೇ ಬೆಳೆದುದೇನು?”

“ಇಲ್ಲಾ. ಕಾಮವರ್ಜಿತವಾದದ್ದೇ ಪ್ರೇಮ. ರಾಕ್ಷಸನನ್ನು ದೇವತೆಯನ್ನಾಗಿಸುವುದು ಪ್ರೇಮ; ದೇವತೆಯನ್ನು ರಾಕ್ಷಸನನ್ನಾಗಿಸುವುದು ಕಾಮ.”

“ಹಾಗಾದರೆ ನಮ್ಮ ಸಂಬಂಧಕ್ಕೆ ಏನೆನ್ನುತ್ತೀರಿ”

“ನಾನು ಪವಿತ್ರಪ್ರೇಮವೆನ್ನುತ್ತೇನೆ.”

"ಪವಿತ್ರಪ್ರೇಮವೆಂದು ಕರೆದರೆ ಆಯಿತೇನು. ಪ್ರೇಮಕ್ಕೆ ತ್ಯಾಗ ಬೇಡವೇ? ಆತ್ಮಾರ್ಪಣ ಬೇಡವೇ?"

"ಬೇಕು. ನಿನ್ನಿಂದ ಅದು ದೊರೆತೂ ಇದೆ. ಆದರೆ ನಾನು....ನಿಜವಾಗಿಯೂ ನಿನ್ನ ಪವಿತ್ರಪ್ರೇಮಕ್ಕೆ ಅರ್ಹನಲ್ಲ. ನಿನ್ನನ್ನೇ ಹೆಂಡತಿಯೆಂದು ಭಾವಿಸುತ್ತೇನೆಂದು ಅಂದು ಮಾತುಗೊಟ್ಟು ಕಂಡ ಕಂಡ ಹೆಂಗಸರೊಂದಿಗೆಲ್ಲಾ ಸ್ನೇಹ ಬೆಳೆಸುತ್ತಿರುವೆ."

"ಅದು ಹೋಗಲಿ. ಇನ್ನು ಮುಂದೆ ನಮ್ಮ 'ಪವಿತ್ರಪ್ರೇಮ' ಕ್ಕಾಗಿ ನಿಮ್ಮ ಕುಡಿತವನ್ನಾದರೂ ಬಿಡುವಿರಾ?"

"ಬಿಡುವೆ" ಎಂದು ಮಾತುಗೊಟ್ಟ. ಮನಸ್ಸಿನಲ್ಲಿಯೇ "ಎಂತಹ ವಂಚನೆ—ಎಂತಹ ವಂಚನೆ" ಎಂದು ತನ್ನನ್ನು ತಾನೇ ಹಳಿದುಕೊಂಡ. ಕುಡಿತವನ್ನು ಬಿಟ್ಟು ಬಿಡಬೇಕೆಂದು ಅನೇಕ ವೇಳೆ ಹಿಂದೆಯೇ ಅಂದುಕೊಂಡಿದ್ದ. ಆದರೆ ಆ ಹೊತ್ತು ಬಂದೊಡನೆಯೇ ಮನಸ್ಸಿನ ನಿರ್ಧಾರಗಳೆಲ್ಲಾ ನುಚ್ಚು ನೂರಾಗಿ ಬಿಡುತ್ತಿದ್ದವು. ಈ ಸಲ ತನ್ನ ಪ್ರೇಯಸಿಗಿತ್ತ ವಚನಕ್ಕೂ ಅದೇ ಗತಿ ಬರುವುದೆಂದು ಅವನು ಹೆದರಿದ. ತಾನು ಪವಿತ್ರಪ್ರೇಮದ ಪ್ರಸ್ತಾಪ ಮಾಡುತ್ತಾ ಅಕ್ಷಮ್ಯವಾದ ಸುಳ್ಳಿನಲ್ಲಿ ಸುಖಪಡುತ್ತಿರುವೆನೆಂದೂ ಒಲ್ಲ. ಆದರೆ ಅವನ ಮನಸ್ಸು ಕೆಲವು ವೇಳೆ ತನ್ನದೋಷವನ್ನು ಅಳೆದುಕೊಳ್ಳುವಷ್ಟು ದಾರ್ಢ್ಯವನ್ನು ಪಡೆದಿದ್ದರೂ ಅದನ್ನು ತಿದ್ದಿಕೊಳ್ಳುವಷ್ಟು ಶಕ್ತಿಯನ್ನು ಪಡೆದಿರಲಿಲ್ಲ.

ಸ್ವಾಮಿ, ಲಲಿತಮ್ಮ ಇವರ ಸಂಬಂಧ ಹೇಗೆಹೇಗೋ ಆರಂಭವಾದದ್ದು ಈಗ ಹೇಗೆಹೇಗೋ ಆಗುತ್ತಿತ್ತು. ರಾಮಕೃಷ್ಣಯ್ಯ ಅಡ್ವೊಕೇಟ್ ಸ್ವಾಮಿಯ ಹತ್ತಿರ ರೈಟರಾಗಿ ನಿಂತಾಗ ಅವನು ಬರಿಗೈಯ್ಯಲ್ಲಿ ಸಂಸಾರವನ್ನು ಆರಂಭಿಸಬೇಕಾಗಿತ್ತು. ಪಿತ್ರಾರ್ಜಿತವೆಂದು ಅವನ ಪಾಲಿಗೆ ಬಂದ ಅಲ್ಪಸ್ವಲ್ಪ ಆಸ್ತಿ ಪಿತ್ರಾರ್ಜಿತ ಸಾಲಕ್ಕೆ ಸರಿಹೋಯಿತು. ಅನುಕೂಲಸ್ಥರ ಮನೆಯ ವಿದ್ಯಾಬುದ್ಧಿ ತಿಳಿದ ಹೆಣ್ಣನ್ನು ಮದುವೆ ಮಾಡಿಕೊಂಡಿದ್ದುದರಿಂದ ಆಕೆಯ ಅಭಿರುಚಿಗೆ ತಕ್ಕ ಹಾಗೆಯೇ ಸಂಸಾರವನ್ನು ಹೂಡಬೇಕಾಗಿತ್ತು. ಸ್ವಾಮಿ ತನ್ನೊಬ್ಬನಿಗಾಗಿ ಮೂವತ್ತು ರೂಪಾಯಿ ಮನೆ ಬಾಡಿಗೆ ಕೊಟ್ಟುಕೊಂಡು, ಮನೆಯನ್ನು ಪೂರ್ಣ ಉಪಯೋಗಿಸಿಕೊಳ್ಳಲಾಗದೆ ವ್ಯಥೆಪಡುತ್ತಿದ್ದ. ರಾಮಕೃಷ್ಣಯ್ಯನ ಕಷ್ಟಸುಖಗಳನ್ನು ಕೇಳಿಕೊಂಡು, ಅವನು ತನ್ನ ಮನೆಯ

ಒಂದು ಭಾಗದಲ್ಲಿರಬಹುದೆಂದು ಅಪ್ಪಣೆಮಾಡಿದ. ಸ್ವಾಮಿ ಹೋಟಲಿನಿಂದ ಅನ್ನವನ್ನು ತರಿಸಿಕೊಂಡು ಊಟಮಾಡುತ್ತಿದ್ದುದು ರಾಮಕೃಷ್ಣಯ್ಯನಿಗೆ ಸರಿಬೀಳದೆ ತನ್ನ ಹೆಂಡತಿಯೇ ಲಾಯರ್ ಸಾಹೇಬರಿಗೂ ಅಡಿಗೆ ಮಾಡಿ ಬಡಿಸಬೇಕೆಂದು ವ್ಯವಸ್ಥೆ ಮಾಡಿದ. ರಾಮಕೃಷ್ಣಯ್ಯನ ಪ್ರಾಮಾಣಿಕತೆ, ಕಾರ್ಯದಕ್ಷತೆ, ತನ್ನ ವಿಚಾರದಲ್ಲಿ ಅವನು ತೋರುತ್ತಿದ್ದ ಗೌರವ ವಿಶ್ವಾಸ ಗಳು ಸ್ವಾಮಿಯನ್ನು ಬಹಳ ಮೆಚ್ಚಿಸಿ, ರಾಮಕೃಷ್ಣಯ್ಯನೇ ತನ್ನ ಎಲ್ಲ ವ್ಯವಹಾರವನ್ನೂ ನೋಡಿಕೊಳ್ಳುವಂತೆ ನಿಯಮಿಸಿದ. ಇದರಿಂದ ರಾಮ ಕೃಷ್ಣಯ್ಯನ ಕೃತಜ್ಞತೆ ಇನ್ನೂ ಹೆಚ್ಚಿತು.

ಉತ್ತಮವಾದ, ದಕ್ಷನಾದ ರೈಟರು ದೊರೆತಂದಿನಿಂದ ಸ್ವಾಮಿಯ ಸಂಪಾದನೆಯೂ ಬೆಳೆಯಿತು. ಮುಕ್ಕಾಲುಪಾಲು ಕೆಲಸವನ್ನು ರಾಮಕೃಷ್ಣ ಯ್ಯನೇ ನಿರ್ವಹಿಸಿಕೊಂಡು ಹೋಗುತ್ತಿದ್ದುದರಿಂದ ಸ್ವಾಮಿಗೆ ಕೆಲವು ವೇಳೆ ವಿರಾಮ ದೊರೆಯಲವಕಾಶವಾಗುತ್ತಿತ್ತು. ಈ ವಿರಾಮವನ್ನು ಸ್ವಾಮಿ ಸದುಪಯೋಗಪಡಿಸಲಾರಂಭಿಸಿದ. ಲಲಿತಮ್ಮನನ್ನು ನೋಡಿದಂದಿನಿಂದ ಅವ ಳಲ್ಲಿ ಮನಸ್ಸು ನೆಟ್ಟುಹೋಗಿತ್ತು. ಚಿನ್ನದ ಬೊಂಬೆಯಂತಹ ಆ ಸುಂದರ ಮೂರ್ತಿ ತನ್ನ ರೂಪಕ್ಕೆ ಒಪ್ಪುವ ಕರಿಯ ಸೀರೆಯನ್ನು ಧರಿಸಿ ಮುಂದೆ ಓಡಾಡಿದರೆ ಸ್ವಾಮಿಯ ದೇಹಾದ್ಯಂತವೂ ಕಂಪಿಸತೊಡಗುತ್ತಿತ್ತು. ಆಕೆಯ ಮಾಟವಾದ ಮುಖದ ಮೇಲಿದ್ದ ಗಾಂಭೀರ್ಯ ಮುಂದುವರಿಯಲು ಅವನನ್ನು ಅಧೀರನನ್ನಾಗಿ ಮಾಡಿತ್ತು. ರೇಡಿಯೋ ಸಂಗೀತವನ್ನು ಕೇಳುತ್ತಾ, ತನ್ನ ತೊಡೆಯ ಮೇಲೆ ಲಲಿತಮ್ಮ ಕುಳಿತು, ಮುಖಕ್ಕೆ ಮುಖವಿಟ್ಟು, ಸಂಗೀತ ವನ್ನು ಜತೆಯಲ್ಲಿ ಕೇಳುತ್ತಿರುವಂತೆ ಮನೋಸಾಮ್ರಾಜ್ಯದಲ್ಲಿ ಕನಸುಕಾಣು ವನು. ಎದ್ದು ಹೊರಗೆ ಬಂದಿತೆಂದರೆ ಗೂಬೆ ಮುಖದ ರಾಮಕೃಷ್ಣಯ್ಯ ನೊಂದಿಗೆ ಅವಳು ಮಾತನಾಡುತ್ತ ನಿಂತಿರುವುದನ್ನು ಕಂಡು ಒಡೆದು ಚೂರಾದ ತನ್ನ ಕನಸಿನ ಕನ್ನಡಿಯನ್ನು ಕೂಡಿಸಿ ಅದರಲ್ಲಿ ಅದೇ ಚಿತ್ರವನ್ನು ಕಾಣಲು ಹಾತೊರೆಯುವನು. ಲಲಿತಮ್ಮನು ಬೆಳೆದು ದೊಡ್ಡವಳಾದಳು, ಇನ್ನೇನು ಗತಿಯೆಂಬ ಭಯದಿಂದ ಸಕಾಲಕ್ಕೆ ಉತ್ತಮ ವರ ದೊರಕದಿರಲು ರಾಮಕೃಷ್ಣ ಯ್ಯನಿಗೆ ಆಕೆಯನ್ನಿತ್ತು ವಿವಾಹ ಮಾಡಿದ ಸಂಗತಿಯನ್ನು ಸ್ವಾಮಿ ಉಪಾ ಯಾಂತರದಿಂದ ಆಕೆಯ ತಮ್ಮನಿಂದ ಸಂಗ್ರಹಿಸಿಕೊಂಡಿದ್ದ. ಅಕ್ಕನನ್ನು

ನೋಡಿ ಹೋಗಬೇಕೆಂದು ಬಂದ ತಮ್ಮ ಇನ್ನೂ ಕೆಲವು ದಿವಸ ಇದ್ದಿದ್ದರೆ ಚೆನ್ನಾಗಿರುತ್ತಿತ್ತಲ್ಲಾ ಎಂದು ವಿಷಾದಪಟ್ಟುಕೊಂಡು, 'ಆದರೆ ವಿಧಿಯಿಲ್ಲ' ಕಳೆದುಹೋದುದು ಹೋಯಿತು, ಎಂದು ಸಮಾಧಾನ ತಂದುಕೊಳ್ಳುವನು.

ಲಲಿತಮ್ಮನ ಮನಸ್ಸೂ ಕ್ರಮಕ್ರಮೇಣ ಸ್ವಾಮಿಯ ಕಡೆಗೇ ಜಾರುತ್ತಿತ್ತು. ಅವಳು ಅದನ್ನು ಮುಚ್ಚಿಡಲು ವಿಶ್ವಸಾಹಸ ಮಾಡುತ್ತಿದ್ದಳು. ಸಾಹಸಮಾಡಿದಷ್ಟೂ ತನ್ನ ಗಂಡನ ಬಗ್ಗೆ ಕೋಪ ಹೆಚ್ಚುತ್ತಿದ್ದಿತೇ ವಿನಾ ಬೇರೆ ಯಾವ ಪ್ರತಿಫಲವೂ ದೊರೆಯುತ್ತಿರಲಿಲ್ಲ. ಸ್ವಾಮಿಯನ್ನು ಒಂದರೆಕ್ಷಣ ಕಾಣದಿದ್ದರೆ ಅವಳ ಮನಸ್ಸು ತಲ್ಲಣಿಸಿ ಹೋಗುತ್ತಿತ್ತು. ದಿನವೂ ಊಟವನ್ನು ಬಡಿಸುವಾಗ ಏನಾದರೂ ನೆವ ತೆಗೆದು ಅವನನ್ನು ಮಾತನಾಡಿಸುವಳು. ಅವನನ್ನು ಬಗೆಬಗೆಯಾಗಿ ಉಪಚರಿಸಿ, ಅವನಿಗೆ ರುಚಿಸುವ ಅಡಿಗೆಗಳನ್ನೇ ಮಾಡಿ ಬಡಿಸುವಳು.

ಒಂದು ದಿನ ರಾಮಕೃಷ್ಣಯ್ಯನ ಊರಿನ ಶಾನುಭೋಗರು ಯಾವದೋ ಕೋರ್ಟಿನ ಮೊಕದ್ದಮೆಗಾಗಿ ಬಂದಿಳಿದರು. ಸ್ವಾಮಿಯೇ ಅವರ ವಕಾಲತ್ತು ವಹಿಸಿದ್ದುದರಿಂದ ಅವರು ರಾಮಕೃಷ್ಣಯ್ಯನ ಅತಿಥಿಗಳಾಗಿ ಉಳಿದುಕೊಂಡರು. ಶಾನುಭೋಗರು ತಮ್ಮ ಹಳ್ಳಿಯಲ್ಲಿ ಆಗಾಗ್ಗೆ ನಡೆಯುತ್ತಿದ್ದ ಬೈಲು ನಾಟಕಗಳ 'ಸೂತ್ರಧಾರ' ಪದವಿಯನ್ನು ಸ್ವೀಕರಿಸುತ್ತಿದ್ದುದರಿಂದ ಸಹಜವಾಗಿ ಕಲಾಭಿಮಾನಿಗಳೂ ಆಗಿದ್ದರು. ಅವರ ಆಸೆಗೆ ಅನುಕೂಲವಾಗಿ 'ಗುಬ್ಬಿಯ ಚನ್ನಬಸವೇಶ್ವರಸ್ವಾಮಿ ಕೃಪಾಪೋಷಿತ ನಾಟಕ ಮಂಡಳಿ' ಯವರು 'ಸದಾರಮೆ' ನಾಟಕವನ್ನು ಶನಿವಾರ ಆಡುತ್ತೇವೆಂದು ಶುಕ್ರವಾರವೇ ಪ್ರಕಟಿಸಿಬಿಟ್ಟಿದ್ದರು. ರಾಮಕೃಷ್ಣಯ್ಯನನ್ನು ಕರೆದುಕೊಂಡು ನಾಟಕಾವ ಲೋಕನಕ್ಕೆ ಹೋಗಿ ಬಿಡುವುದೆಂದೇ ಶಾನುಭೋಗರು ನಿಶ್ಚಯಿಸಿದರು. ಹೆಂಡತಿಯನ್ನು ಬಿಟ್ಟು ತಾನೊಬ್ಬನೇ ಹೋಗುವುದಕ್ಕೆ ಇಷ್ಟವಿಲ್ಲ. ಈ ಸೂಕ್ಷ್ಮವನ್ನು ನೋಡಿಕೊಂಡು ಶಾನುಭೋಗರು ಲಲಿತಮ್ಮನನ್ನೂ ಆಹ್ವಾನಿಸಿದರು. ತಾನು ಅಂದು ತಾನೆ ಋತುಸ್ನಾನವನ್ನು ಮಾಡಿದ್ದುದರಿಂದ ಬರಲಾಗುವುದಿಲ್ಲವೆಂದು ಖಂಡಿತವಾಗಿ ಹೇಳಿ, ಯಜಮಾನರು ಬೇಕಾದರೆ ಹೋಗಿ ಬರಬಹುದೆಂದು ಅಪ್ಪಣೆಯನ್ನಿತ್ತಳು ರಾಮಕೃಷ್ಣಯ್ಯನಿಗೆ ಇಷ್ಟವಿಲ್ಲದಿದ್ದರೂ ಅವನನ್ನು ಬಿಡದೆ ಶಾನುಭೋಗರು ಎಳೆದುಕೊಂಡು ಹೋದರು.

ಗಂಡ ಪ್ರಯಾಣ ಮಾಡುವ ಹೊತ್ತಿಗೆ ಲಲಿತಮ್ಮನಿನ್ನೂ ಮನೆಗೆಲಸ ಗಳನ್ನು ಮುಗಿಸಿರಲಿಲ್ಲ. ಉಪಕರಣೆಯ ಪಾತ್ರೆಗಳನ್ನು ತೊಳೆದಿಟ್ಟು ಬೆಳಗ್ಗೆ ಕಾಫಿಗೆ ಪುಡಿಯನ್ನು ಕಾಫಿ ಪಾತ್ರೆಗೆ ಹಾಕಿ ಸ್ಟೋವಿನ ಬಳಿಯಿಟ್ಟು ಮಿಕ್ಕ ಅಡಿಗೆಯನ್ನು ಹೊರಗೆ ಹಾಕಿ ಬಂದು ತೊಳದಿಟ್ಟಿದ್ದ ಪಾತ್ರೆಗಳನ್ನು ಗೂಡಿನಲ್ಲಿ ಓರಣವಾಗಿಡುತ್ತಾ ನಿಂತಿದ್ದಳು. ಬಾಗಿಲ ಬಳಿ ಏನೋ ಶಬ್ದವಾದಂತಾಯಿತು. ತಿರುಗಿ ನೋಡಿದಳು—ಎದುರಿಗೆ ಸ್ವಾಮಿ. ಸ್ವಲ್ಪ ಹೊತ್ತು ಮಾತುಕತೆಗೆ ಅವಕಾಶವೇ ದೊರೆಯದಿದ್ದಂತೆ ಇಬ್ಬರೂ ಇದ್ದಲ್ಲಿಯೇ ಸುಮ್ಮನೆ ನಿಂತುಬಿಟ್ಟಿದ್ದರು. ಲಲಿತಮ್ಮನ ಎದೆ ವೇಗವಾಗಿ ಬಡಿದುಕೊಳ್ಳಲಾರಂಭಿಸಿತು. ತಾನು ನಿಂತಿದ್ದ ಜಾಗದಿಂದಲೇ ಆಕೆಯ ಎದೆಯ ಮೇಲೆ ಕಾಣುತ್ತಿದ್ದ ಉದ್ವೇಗಭರದ ಉಬ್ಬರವಿಳಿತಗಳನ್ನು ಸ್ವಾಮಿ ಗಮನಿಸಿದ. ಮಾತನ್ನು ಹೇಗೆ ಆರಂಭಿಸ ಬೇಕೆಂದು ಅವನಿಗೆ ತೋರದು. ಧೈರ್ಯಮಾಡಿಕೊಂಡು

"ನೀವು ಏತಕ್ಕೆ ಹೋಗಲಿಲ್ಲ ನಾಟಕಕ್ಕೆ."

ಅವಳಿಂದ ಉತ್ತರ ದೊರೆಯಲಿಲ್ಲ. ಮತ್ತೆ ಸಾಹಸಮಾಡಿ

"ಊಟವಾಯಿತೇನು ?"

"ಆಯಿತು."

ಮಾತನಾಡಿದಳಲ್ಲಾ ಎಂದು ತುಸು ಸಮಾಧಾನವಾದರೂ 'ಆಯಿತು' ಎಂಬ ತುಂಡುಮಾತು ಅವನನ್ನು ತೃಪ್ತನನ್ನಾಗಿಸಲಿಲ್ಲ.

"ನಾಟಕ ಬೇಡವಾಯಿತೇನು ?"

"ಹೂ! ನಾನು ಆ ನಾಟಕವನ್ನು ಹಿಂದೆ ನೋಡಿದ್ದೆ. ಅವಕ್ಕೋಸ್ಕರ........"

ಸ್ವಾಮಿ ಮನಸ್ಸಿಗೀಗ ಸಮಾಧಾನ ಹುಟ್ಟಿತು. ಉತ್ಸುಕನಾಗಿ ಕೊಂಚ ಮುಂದುವರಿದ. ಅವಳು ಬೆದರಿದಂತೆ ಕಂಡು ಬರಲು ದುಡುಕಬಾರದೆಂದು ನಿಂತಲ್ಲಿಗೇ ಬಂದು

"೯॥ ಆಗುತ್ತಾ ಬಂದರೂ ಮನೆಗೆಲಸ ತೀರಿಲ್ಲವೇ ?"

"ತೀರಿತು. ನಾನೂ ಹೊರಗೆ ಹೋಗುವುದರಲ್ಲಿದ್ದೆ."

"ಹಾಗಾದರೆ ಸರಿ"

ಸ್ವಾಮಿ ನಡುಮನೆಗೆ ಬಂದು ಅಲ್ಲಿ ಗೋಡೆಯ ಮೇಲೆ ನೇತುಹಾಕಿದ್ದ

ಲಲಿತಮ್ಮನ ವಿವಾಹ ಚಿತ್ರವನ್ನು ನೋಡುತ್ತಾ ನಿಂತ. ಲಲಿತಮ್ಮ ಅಡಿಗೆಯ ಮನೆಯ ದೀಪ ಆರಿಸಿ, ಬಾಗಿಲನ್ನು ಹಾಕಿಕೊಂಡು ನಡುಮನೆಯ ಬಾಗಿಲಲ್ಲೇ ನಿಂತಳು. ಸ್ವಾಮಿ

"ನಿಮ್ಮ ಮದುವೆಯಲ್ಲಿ ತೆಗೆದುಕೊಂಡದ್ದಲ್ಲವೇ ಈ ಫೋಟೋ."

"ಹೌದು."

"ಆಗ್ಲೂ ಈಗ್ಲೂ ರಾಮಕೃಷ್ಣಯ್ಯನವರಲ್ಲಿ ಬಹಳ ವ್ಯತ್ಯಾಸ ಕಾಣ ಬರುವುದಿಲ್ಲ. ಆದರೆ........"

"ಆದರೇನು ?"

"ನಿಮ್ಮಲ್ಲಿ ಬಹಳ ವ್ಯತ್ಯಾಸ ಕಾಣಬರುತ್ತಿದೆ."

"ಏನು ವ್ಯತ್ಯಾಸ."

"ಮೊದಲನೆಯದು ಫೋಟೋ ತೆಗೆಸಿಕೊಳ್ಳುವಾಗ ನೀವು ಬಹಳ ಕೋಪಮಾಡಿಕೊಂಡಿದ್ದಿರಿ—ಈಗ ಇಲ್ಲ; ಎರಡನೆಯದಾಗಿ ಆಗ್ಗಿಂತಲೂ ಈಗ ಬಹಳ ರೂಪವತಿಯಾಗಿದ್ದೀರಿ........ಇನ್ನೂ ಹೇಳಲೋ ?"

"ಬೇಡಿ ಬೇಡಿ—ಸಾಕು." ಎಂದು ನಿಟ್ಟುಸಿರುಬಿಟ್ಟಳು. ಸ್ವಾಮಿ ಅದನ್ನು ಕಂಡು ಸ್ವಲ್ಪ ಮುಂದುವರಿದು ಬಂದ. ಲಲಿತಮ್ಮನ ಮುಖ ಯಾವುದೋ ಪೂರ್ವಸ್ಮರಣೆಯಲ್ಲಿ ಮಗ್ನವಾಗಿದ್ದುದರಿಂದ ಅವನ ಆಗಮನ ವನ್ನು ಗಮನಿಸಲಿಲ್ಲ.

"ಏತಕ್ಕೆ ನಿಟ್ಟುಸಿರು ಬಿಡುವಿರಿ. ಸಂಸಾರದಲ್ಲಿ ಸುಖವಿಲ್ಲವೇ ?"

"ಸುಖವಿಲ್ಲದೇನು. ಬೇಕಾದಷ್ಟಿದೆ. ದೇವರು ಯಾವದಕ್ಕೆ ಕಡಿಮೆ ಮಾಡಿದ್ದಾನೆ"

ಎಂದು ಹೇಳುತ್ತ ಹೇಳುತ್ತ ಕಣ್ಣೀರಿನ ಪ್ರವಾಹ ಹೊರಟುಬಿಟ್ಟಿತು.

"ಇಲ್ಲ. ನಿಮಗೆ ಸುಖವಿಲ್ಲ. ಕೇವಲ ದಾಕ್ಷಿಣ್ಯಕ್ಕೆ ಹಾಗೆ ಹೇಳು ತ್ತಿರುವಿರಿ. ಅವನು ನಿಮಗೆ ತಕ್ಕವನಲ್ಲ. ವಿಧಿಯ ಬಲಾತ್ಕಾರದ ಬಂಧನ ವಿದು."

ಲಲಿತಮ್ಮನು ನಿರುತ್ತರಳಾಗಿದ್ದಳು. ಕಣ್ಣಿಂದ ಧಾರೆಧಾರೆಯಾಗಿ ಅಶ್ರುಬಿಂದುಗಳು ಉರುಳುತ್ತಿದ್ದವು. ಒಮ್ಮೆಮಾತ್ರ ಕಣ್ಣೆತ್ತಿ ಸ್ವಾಮಿಯನ್ನು ನೋಡಿ ಮತ್ತೆ ತಲೆಬಾಗಿದಳು. ಆ ನೋಟದ ದೈನ್ಯತೆ ಸ್ವಾಮಿಯ ಅಂತಃ

ಕರಣವನ್ನು ಸೂರೆಮಾಡಿಬಿಟ್ಟಿತು. ತಾನು ಏನು ಮಾಡುತ್ತಿರುವೆನೆಂಬು ದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಲಲಿತಮ್ಮನನ್ನು ಭರದಿಂದ ಅಪ್ಪಿದ. ಮೆಲ್ಲನೆ ತುಟಿಯನ್ನು ಕೂಡಿಸಿದ. ನಾಲ್ಕು ಕಣ್ಣುಗಳೂ ಸೇರಿದವು ಅವನು ಅಪ್ಪಿ ದಾಗ 'ಬೇಡವೆನ್ನಲು' ಮುಂದೆ ಚಾಚಿದ ಕೈಯೊಂದು ಅವನ ಕುತ್ತಿಗೆಯನ್ನು ಒಳಸಿತು. ಹಾಗೆಯೇ ಅವಳನ್ನು ಎತ್ತಿಕೊಂಡು ತನ್ನ ಕೋಣೆಯ ಕಡೆಗೆ ತೆರಳಿದನು.

* * * *

ಸ್ವಾಮಿ, ಲಲಿತಮ್ಮ ಇವರ ಅನ್ಯೋನ್ಯ ಪ್ರೇಮ ಬೆಳೆಯುತ್ತಾ ರಾಮಕೃಷ್ಣಯ್ಯನೊಂದಿಗೆ ಆಕೆಯ ದಾಂಪತ್ಯಜೀವನ ಕೇವಲ ವ್ಯವಹಾರಿಕ ವಾಗುತ್ತ ಬಂತು. ಮುಂದಿನ ದಿವಸದ ಕೇಸುಗಳ ವರದಿ, ಟೀಕೆ ಟಿಪ್ಪಣಿಗಳನ್ನು ರಾತ್ರಿ ಎಷ್ಟು ಹೊತ್ತಾಗಲಿ ಅಂದು ಅಂದೇ ಸಿದ್ಧಪಡಿಸಿ ಮನೆಗೆ ತರಬೇಕೆಂದೂ ತಾನು ಮುಂಜಾನೆ ಅಷ್ಟುಹೊತ್ತಿಗೇ ಎದ್ದು ಅವುಗಳನ್ನು ಕಂಠಪಾಟ ಮಾಡಿ ಕೊಳ್ಳುವುದಾಗಿ ಸ್ವಾಮಿಯ ಅಜ್ಞೆಯಾಗಿದ್ದದರಿಂದ ರಾಮಕೃಷ್ಣಯ್ಯನು ರಾತ್ರಿ ೧೦—೧೧ ಘಂಟೆಗೆ ಮುಂಚೆ ಮನೆಸೇರಲು ಅವಕಾಶವೇ ಆಗುತ್ತಿರಲಿಲ್ಲ. ನಗರದ ಮುಖ್ಯಸ್ಥರಲ್ಲಿ ಒಬ್ಬರೆಂದು ಸ್ವಾಮಿಗೆ ಎಲ್ಲಾ ನಾಟಕದ ಕಂಪೆನಿಯ ವರೂ ಬೆಂಗಳೂರು ಮೊಕ್ಕಾಂ ಮಾಡಿದಾಗ ಸೀಸನ್ ಕಾಂಪ್ಲಿಮೆಂಟರಿ ಪಾಸನ್ನು ಕಳುಹಿಸುತ್ತಿದ್ದುದರಿಂದ ರಾಮಕೃಷ್ಣಯ್ಯನನ್ನು ಕೆಲವು ರಾತ್ರಿಗಳಾದರೂ ಮನೆಯಿಂದ ಆಚೆ ಇಟ್ಟಿರಲು ಸಾಧ್ಯವಾಗುತ್ತಿತ್ತು.

ಒಂದು ದಿನ ದುಡಿದು ದುಡಿದು ಸಾಕಾಗಿ ಧಣಿ ಕೇಳಿದರೆ ಆಯಾಸವಾಗಿದೆ ಯೆಂದು ಹೇಳಲು ಧೈರ್ಯಮಾಡಿ ರಾತ್ರಿ ೮॥ ಘಂಟೆಗೇ ರಾಮಕೃಷ್ಣಯ್ಯ ಮನೆಯ ಕಡೆ ಬಂದ. ನಡುಮನೆ, ಅಡಿಗೆ ಮನೆಗಳಲ್ಲಿ ದೀಪ ಉರಿಯುತ್ತಿ ದ್ದರೂ ಲಲಿತೆಯ ಸುಳಿವು ಕಾಣಬರಲಿಲ್ಲ. ಹಾಗೆಯೇ ಮನೆಯನ್ನು ಬಳ ಸಲು ಸ್ವಾಮಿಯ ಶಯ್ಯಾಗೃಹದ ದೀಪ ಉರಿಯುತ್ತಿದ್ದುದನ್ನು ಕಂಡು, ಲಾಯರು ಎದ್ದಿದ್ದರೆ ಅವರನ್ನೇ ಕೂಗಿ ಬಾಗಿಲು ತೆಗೆಸಲು ಇಣಿಕಿ ನೋಡಿದ. ಅಲ್ಲಿ ಕಂಡ ದೃಶ್ಯ ಅವನನ್ನು ಚಿಕಿತನನ್ನಾಗಿ ಮಾಡಿತು. ಮುಖದ ಮೇಲೆ ಬೆವರು ಹನಿಗಳು ಕಾಣಿಸಿಕೊಂಡವು. ಉಸಿರೆತ್ತದೆ ಮತ್ತೆ ತನ್ನ ಮನೆಯ ಬಳಿಗೇ ಬಂದು, ಅಲ್ಲಿ ಗಟ್ಟಿಯಾಗಿ ಕೂಗಿದ. ಸ್ವಲ್ಪ ಹೊತ್ತು ಕಳೆದನಂತರ

ಲಲಿತೆಯೇ ಕಣ್ಣು ಉಜ್ಜಿಕೊಳ್ಳುತ್ತ ಎದ್ದು ಬಂದು ಬಾಗಿಲು ತೆಗೆದಳು.

"ಎಷ್ಟು ಕೂಗಿದರೂ ಬಾಗಿಲೇ ತೆಗೆಯಬೇಡವೇ."

"ಏನು ಮಾಡಲಿ. ಯಾವುದೋ ಪುಸ್ತಕ ಓದುತ್ತಾ ಹಾಗೆಯೇ ಮಲಗಿದೆ, ನಿದ್ರೆಬಂತು. ನೀವು ಬಂದು ಎಷ್ಟು ಹೊತ್ತಾಯಿತು."

"ಬಹಳ ಹೊತ್ತೇನು ಆಗಿಲ್ಲ ಈಗತಾನೆ ಬಂದೆ. ಇದೇನು ಇವತ್ತು ಎಂದೂ ಇಲ್ಲದ್ದು ನಿನಗೆ ಒಂಭತ್ತು ಘಂಟೆಗೇ ನಿದ್ರೆ ಬಂದದ್ದು. ದಿನವೂ ನಾನು ಬರುವುದು ಹತ್ತು ಹನ್ನೊಂದಾದರೂ ಕಾಯುತ್ತಿದ್ದೆ."

"ಏನೋ ಮೈಕೈ ಸ್ವಲ್ಪ ನೋಯುತ್ತಿತ್ತು. ಹಾಗೇ ಮಲಗಿದೆ ಅಷ್ಟೇ. ಏಳಿ ಒಂದು ದಿವಸವಾದರೂ ಬೇಗ ಬಂದಿದ್ದೀರಿ. ಬಿಸಿಬಿಸಿಯಾಗಿ ಊಟಮಾಡುವಿರಂತೆ."

ಎಂದು ಗಂಡನನ್ನು ಉಪಚರಿಸಿ ಬಡಿಸಿದಳು. ಆ ದಿನದ ಅವಳ ಉಪಚಾರ ರಾಮಕೃಷ್ಣಯ್ಯನಿಗೆ ವಿಚಿತ್ರವಾಗಿ ಕಂಡುಬಂತು. ಗಂಡನ ವರ್ತನೆಯನ್ನು ಕಂಡು ಏನೂ ಅನುಮಾನ ಬಂದಿಲ್ಲವೆಂದು ನಿಶ್ಚಯಿಸಿಕೊಂಡು ತನ್ನನ್ನು ತಾನೇ ಸಮಾಧಾನಪಡಿಸಿಕೊಂಡಳು.

ಸ್ವಾಮಿಯ ಪ್ರೇಮಸಹವಾಸದಲ್ಲಿ ಲಲಿತಮ್ಮನಿಗೆ ಹೊಸ ಪ್ರಪಂಚವೇ ಕಂಡಂತಾಯಿತು. ಅವನ 'ಅತಿರೇಕ'ದ ನಡತೆಯನ್ನು ಕಂಡು ಒಮ್ಮೊಮ್ಮೆ ಕೆಂಡಕೆಂಡವಾಗುತ್ತಿದ್ದರೂ ಅವನ ದಯಾರ್ದ್ರ ಸ್ವಭಾವ, ಸರಳ ಸೌಜನ್ಯ ಅವಳನ್ನುಮುಗ್ಧಳನ್ನಾಗಿಸಿಬಿಟ್ಟಿತ್ತು. ತನ್ನಲ್ಲಿ ಸುಪ್ತವಾಗಿದ್ದ ಅನೇಕ ಚೇತನಗಳು ಅವನ ಸಹವಾಸದಿಂದ ಜಾಗೃತವಾಗುತ್ತಿದ್ದುದನ್ನು ಕಂಡುಕೊಂಡಳು. ಒಮ್ಮೊಮ್ಮೆ ಆವೇಶಭರಿತನಾಗಿ ಎಮರ್ಸನ್, ಕಾರ್ಲೈಲ್, ವ್ಹಿಟ್‌ಮನ್, ಕಾರ್ಪೆಂಟರ್ ಮೊದಲಾದವರ ವಿಚಾರ ಹೇಳ ಹೊರಟರೆ ಅವನ ಕಣ್ಣಿಂದ ಚಿಮ್ಮುತ್ತಿದ್ದ ಕಿಡಿಗಳನ್ನು ಕೂಡಿಹಾಕಿಕೊಳ್ಳಲೆತ್ನಿಸುತ್ತಿದ್ದಳು ತನ್ನ ಎಳೆಯೌವನ ಹೇಗೆ ತಾಯ್ತಂದೆಗಳ ಮೌಢ್ಯದಿಂದ ಕರಟಲು ಬಿದ್ದಿತ್ತು, ತನ್ನ ವಿದ್ಯಾವ್ಯಾಸಂಗ ಹೇಗೆ ವಿವಾಹವೇದಿಕೆಗೆ ಬಲಿಯಾಗಿ ಹೋಯಿತು ಎಂದು ನೆನೆನೆನೆದು ಪರಿತಾಪಪಡುತ್ತಿದ್ದ ಲಲಿತಮ್ಮನ ಮನಸ್ಸಿಗೆ ದೊಡ್ಡ ಸಮಾಧಾನ ದೊರೆತಂತಾಯಿತು. ಲಲಿತಮ್ಮನಿಗೆ ಓದಲು ಹೇಳಿಕೊಡುತ್ತಿದ್ದ ಗ್ರಂಥಗಳನ್ನು ತಾನೂ ಮತ್ತೊಮ್ಮೆ ಓದಿ ಸ್ವಾಮಿ ಅವಳು ಓದಿದಾನಂತರ

ಅದರ ವಿಮರ್ಶೆ ಮಾಡಲು ಅವಳನ್ನು ಪ್ರೇರೇಪಿಸುವನು. ಮೊದಮೊದಲು ಎಲ್ಲ ಗ್ರಂಥಗಳಲ್ಲಿಯೂ ಒಂದೇ ಬಗೆಯ ಸೌಂದರ್ಯವನ್ನು ಕಾಣುತ್ತಿದ್ದ ಲಲಿತಮ್ಮನಿಗೆ ಕ್ರಮಕ್ರಮೇಣ ಗ್ರಂಥಗಳ ಬಗೆಬಗೆಯ ಸೌಂದರ್ಯ ಗೋಚರಿಸಲಾರಂಭಿಸಿದುವು. ತಾನು—ತನ್ನ ಆತ್ಮ ಹಗಲಿರುಳೂ ಹಂಬಲಿಸಿ ಬಯಸುತ್ತಿದ್ದ ಸಖ ಇವನೇ ಎಂಬ ಭಾವನೆ ಅವಳ ಮನಸ್ಸಿನಲ್ಲಿ ಬೇರೂರಿಬಿಟ್ಟಿತು. ಮೊದಲೇ ಹೆಂಡತಿಯ ಕುಶಾಗ್ರಮತಿಗೆ ಸರಿತೂಗಲಾರದೆ ಹೆದರುತ್ತಿದ್ದ ರಾಮಕೃಷ್ಣಯ್ಯ ಈಗಂತೂ ಆಕೆ ಒಂದು ಮಾತನ್ನಾಡಿದರೆ ಅಲ್ಲೇ ಉಡುಗಿ ಹೋಗಿಬಿಡುವನು ತನಗೂ, ಲಲಿತೆಗೂ ದಿನದಿನಕ್ಕೂ ಎಲ್ಲ ವಿಧದಲ್ಲಿಯೂ ಸಂಬಂಧವು ದೂರವಾಗುತ್ತಿದೆಯೆಂದು ಅವನು ಗ್ರಹಿಸುತ್ತ ಬಂದ.

ಇಷ್ಟು ದಿವಸವೂ ಗುಪ್ತವಾಗಿ ಬೆಳೆಯುತ್ತಿದ್ದ ಬಾಂಧವ್ಯ ಒಂದು ದಿವಸ ಬಹಿರಂಗಕ್ಕೆ ಬರಬೇಕಾಯಿತು. ರಾಮಕೃಷ್ಣಯ್ಯ ಮನೆಯಲ್ಲಿರುವುದನ್ನು ಅರಿಯದೆ ಒಂದು ಭಾನುವಾರ ಸಹಜವಾದ ನಿಸರ್ಗಪ್ರೇರಣೆಯಿಂದ ಸ್ವಾಮಿ ಲಲಿತೆಯ ಮೇಲೆ ಕೈಹಾಕಿದ ರಾಮಕೃಷ್ಣಯ್ಯ ಎದ್ದು ಹೊರಗೆ ಹೋಗಲು ಬಂದು ಈ ನೋಟವನ್ನು ಕಂಡು ಹಾಗೆಯೇ ಒಳಕ್ಕೆ ಹೊರಟುಹೋದ. ತನ್ನ ಗುಪ್ತಜೀವನ ಗಂಡನಿಗೆ ಗೊತ್ತಾಗಿ ಹೋಯಿತಲ್ಲಾ ಎಂದು ಲಲಿತಮ್ಮ ನಡುಗಿಬಿಟ್ಟಳು. ಸ್ವಾಮಿ ತಾನು ಅದನ್ನು ಸರಿಪಡಿಸುವುದಾಗಿ ಭರವಸೆಯಿತ್ತು ಆಕೆಯನ್ನು ಸಮಾಧಾನಪಡಿಸಿ, ಅಂದೇ ಸಾಯಂಕಾಲ ತನ್ನನ್ನು ಬಂದು ಕಾಣಬೇಕೆಂದು ರಾಮಕೃಷ್ಣಯ್ಯನಿಗೆ ಹೇಳಿ ಕಳುಹಿಸಿದ.

ರಾಮಕೃಷ್ಣಯ್ಯನಿಗೆ ಬಗೆಹರಿಯಲಿಲ್ಲ, 'ಯಾವಕಾರಣಕ್ಕೆ ಇಷ್ಟು ತ್ವರೆಯಿಂದ ಬರಮಾಡಿಕೊಂಡಿದ್ದಾರೆ' ಎಂದು ಯೋಚಿಸಿ ಯೋಚಿಸಿ ಸುಮ್ಮನಾಗಿ ಬಿಟ್ಟ. ಸಂಜೆ ಐದು ಘಂಟೆಯ ಸುಮಾರಿಗೆ ಸ್ವಾಮಿ ತನ್ನ ದಿವಾನುಖಾನೆಯಲ್ಲಿ ಸಿಗಾರನ್ನು ಎಳೆಯುತ್ತಾ ಯಾವದೋ ಒಂದು ಪುಸ್ತಕ ಓದುತ್ತಾ ಕುಳಿತಿದ್ದಾಗ ರಾಮಕೃಷ್ಣಯ್ಯ ಹೋಗಿ ಕಾಣಿಸಿಕೊಂಡ.

"ಬನ್ನಿ. ಬನ್ನಿ ರಾಮಕೃಷ್ಣಯ್ಯಾ. ನಿಮ್ಮ ನಿರೀಕ್ಷಣೆಯಲ್ಲೇ ಇದ್ದೆ. ಕುಳಿತುಕೊಳ್ಳಿ. ನಿಂತೇ ಇರುವಿರಲ್ಲಾ. ಕುಳಿತುಕೊಳ್ಳಿ ಅಂದ್ರೆ."

"ಇರಲಿ ಸ್ವಾಮಿ" ಎಂದು ಬಲವಂತಕ್ಕಾಗಿ ಕುಳಿತುಕೊಂಡ. ಸ್ವಾಮಿ ಸಿಗಾರಿನ ಬೂದಿಯನ್ನು ಎದುರಿಗಿದ್ದ ಪುಟ್ಟ ತಟ್ಟೆಗೆ ಚೆಲ್ಲುತ್ತಾ ಅದನ್ನೇ

ನೋಡುತ್ತಾ ಸಾವಕಾಶವಾಗಿ

"ನಿಮ್ಮ ಹತ್ತಿರ ಒಂದು ಮುಖ್ಯವಾದ ಸಂಗತಿ ಮಾತನಾಡಬೇಕಾಗಿದೆ ರಾಮಕೃಷ್ಣಯ್ಯಾ. ನೀವು ಮನಸ್ಸಿಗೇನೂ ತಿಳಿದುಕೊಳ್ಳಕೂಡದು."

"ಏನು ಸ್ವಾಮಿ ಹೀಗೆ ಹೇಳುತ್ತೀರಿ. ತಮ್ಮ ಹತ್ತಿರ ನಾನು........ ಅನ್ನ ಕೊಟ್ಟ ಧಣಿ ಹತ್ತಿರ........"

"ಅದೆಲ್ಲಾ ಸರಿ. ಆದರೆ ನಾನು ಹೇಳುವುದನ್ನು ಕೇಳಿದ ಮೇಲೆ ನೀವು ಹೀಗೆ ಅನ್ನಲಾರಿರಿ. ಸಾವಕಾಶವಾಗಿ ನಾನು ಹೇಳುವುದನ್ನು ಕೇಳಿ. ಆಮೇಲೆ ಏನುಮಾಡಬೇಕೆಂದು ಇಬ್ಬರೂ ಆಲೋಚಿಸೋಣ. ಯಾವದನ್ನೂ ದುಡುಕಬೇಡಿ........ನಿಮ್ಮ ಕುಟುಂಬಕ್ಕೂ....ನನಗೂ....ಸಂಬಂಧ ಇರುವ ವಿಚಾರ ನಿಮಗೆ ಗೊತ್ತಿಲ್ಲದೇ ಇರಬಹುದು. ಇವತ್ತು ಬೆಳಿಗ್ಗೆ ನಾನು ಆಕೆಯ ಮೈಮೇಲೆ ಕೈಹಾಕಿದುದನ್ನು ನೀವು ನೋಡಿದ್ದರಿಂದ...."

"ನನಗೆ ಎಲ್ಲವೂ ಗೊತ್ತಿದೆ ಸ್ವಾಮಿ. ತಾವು ಅದನ್ನು ಪುನಃ ಹೇಳಬೇಕಾದ ತೊಂದರೆ ತೆಗೆದುಕೊಳ್ಳಬೇಕಾದದ್ದಿಲ್ಲ."

"ಯಾವಾಗ....ಹೇಗೆ ಗೊತ್ತು."

"ಅವತ್ತು ನಾನು ಮನೆಗೆ ೮॥ ಘಂಟೆಗೆ ಬಂದೆನಲ್ಲಾ ಆಗ ಎಲ್ಲವನ್ನೂ ಕಣ್ಣಾರೆ ಕಂಡೆ."

"ಅದು ನಡೆದು ಸುಮಾರು ಆರು ತಿಂಗಳಾಯಿತು."

"ಹೌದು. ಆಗಿನಿಂದಲೂ ಬಲ್ಲೆ. ಅದಕ್ಕೇ ನಾನೇ ಆದಷ್ಟು ದೂರವೇ ಇದ್ದದ್ದು."

"ತಿಳಿದೂ ಸುಮ್ಮನೆ ಇದ್ದಿರಾ........"

"ಏನುಮಾಡಲಿ. ತಮ್ಮ....ಅವಳ....ಅನುರಾಗ ಬಲ್ಲೆ. ಅದಕ್ಕೆ ನಾನು ಏತಕ್ಕೆ ಅಡ್ಡಿಯಾಗಲಿ....ಅಲ್ಲದೆ ತಾವು ಅನ್ನಕೊಟ್ಟ ಧಣಿ........"

ಎಂದು ದೈನ್ಯದಿಂದ ಎರಡು ಅಂಗೈಗಳನ್ನೂ ಉಜ್ಜಲಾರಂಭಿಸಿದ. ಒಳಗೊಳಗೆ ಉಕ್ಕಿ ಬರುತ್ತಿದ್ದ ತಿರಸ್ಕಾರ—ಸಂತೋಷ ಸಂಮಿಶ್ರವಾದ ನಗೆಯನ್ನು ಅಡ್ಡಕಟ್ಟುತ್ತಾ ಸ್ವಾಮಿ

"ಎಷ್ಟು ದೊಡ್ಡ ಮನಸ್ಸು ನಿಮ್ಮದು ರಾಮಕೃಷ್ಣಯ್ಯಾ. ನಿಮ್ಮನ್ನು ನೋಡಿ ನನಗೇ ಅಯ್ಯೋ ಅನ್ನಿಸುತ್ತದೆ."

"ಏತಕ್ಕೆ ಸ್ವಾಮಿ."

"ನಾನು ಮಾಡಿರುವುದನ್ನು ನೋಡಿ ನೀವು ನನ್ನನ್ನು ಖೂನಿಮಾಡಬಹುದೆಂದಿದ್ದೆ....ಕೊನೆಗೆ ಹೆಂಡತಿಯನ್ನು ಕರೆದುಕೊಂಡು ಹೊರಟು ಹೋಗುವಿರೆಂದಿದ್ದೆ."

"ಇಲ್ಲ. ಅದು ತಪ್ಪುಮಾರ್ಗವೆಂದು ಹಾಗೆ ಯೋಚಿಸಿದ್ದವನು ಸುಮ್ಮನಾದೆ. ತಮ್ಮನ್ನು ಬಿಡಿಸಿ ಕರೆದುಕೊಂಡು ಹೋದರೆ ಅವಳ ಗೋಳು ತಪ್ಪುವ ಹಾಗಿಲ್ಲ. ಗೋಳಿಗೆ ತಲೆಬಾಗಿ ಅವಳು ಬೀದಿಗೆ ಬಂದು ನಿಲ್ಲಬಹುದು. ಒಂದು ತಪ್ಪು ತಿದ್ದುವುದಕ್ಕೆ ಹೋಗಿ ನಾನೇ ನೂರು ತಪ್ಪುಗಳನ್ನು ಮಾಡಿಸಿದಂತಾಗುತ್ತದಲ್ಲಾ ಎಂದು ಸುಮ್ಮನಾದೆ ಅಲ್ಲದೆ...."

"ಏನು, ಹೇಳಿ........"

"ನನಗಿಂತಲೂ ಲಲಿತನಿಗೆ ತಾವೇ ತಕ್ಕಪತಿಗಳು. ಮೊದಲಿಂದಲೂ ಅವಳಿಗೆ ನನ್ನ ಮೇಲೆ ರವೆಯಷ್ಟೂ ಪ್ರೇಮವಿಲ್ಲ. ನಮ್ಮ ಪ್ರೇಮಶೂನ್ಯ ವಿವಾಹದಿಂದ ಅವಳ ಜೀವನವು ಶುದ್ಧ ನೀರಸವಾಗಿತ್ತು. ಅವಳ ಆಶಾವೃಕ್ಷ ಬರಡಾಗುತ್ತಿತ್ತು. ತಾವು ಅದಕ್ಕೆ ನೀರೆರೆದು ಮತ್ತೆ ಚಿಗುರಿ, ಹೂವು ಬಿಡುವಂತೆ ಮಾಡಿದಿರಿ. ಯಾರದೋ ತಪ್ಪಿಗೆ ಲಲಿತನಿಗೇತಕ್ಕೆ ಶಿಕ್ಷೆಯೆಂದು ನಾನು ಅವಳ ಜೀವನದಿಂದ ಹೊರಗಿರಲು ನಿಶ್ಚಯಿಸಿದೆ."

"ಆದರೆ ನಿಮ್ಮ ಜೀವನ........"

"ಅದು ಹೇಗಾದರೂ ನಡೆಯುತ್ತದೆ. ತಮ್ಮ ಆಶ್ರಯವಿರುವ ತನಕ ಹೊಟ್ಟೆ ಬಟ್ಟೆಯ ಯೋಚನೆಯಿಲ್ಲ. ಇನ್ನು ಮಿಕ್ಕದ್ದಕ್ಕೆ ಬೆಂಗಳೂರೇನು ಹಾಳೇ?"

"ನಿಮ್ಮ ಸಂಸಾರ....ಮನೆ....ಮಕ್ಕಳು."

"ನಾನು ಕವಿಯಲ್ಲ ಸ್ವಾಮಿ. ನನಗಾ ಕನಸುಗಳಿಲ್ಲ. ನನಗೆ ಮನೆಯೂ ಬೇಡ, ಮಕ್ಕಳೂ ಬೇಡ. ಇರುವ ತನಕ ತಾಪತ್ರಯವಿಲ್ಲದೆ ಇದ್ದರೆ ಸಾಕು."

"ಇಲ್ಲ. ನೀವು ಹಾಗೆನ್ನಬಾರದು. ಬೇರೆ ಮದುವೆಯ ಪ್ರಯತ್ನ ನಡೆಸಿ. ಹೆಣ್ಣಿನವರು ಕೇಳುವಷ್ಟು ಕನ್ಯಾಶುಲ್ಕವನ್ನು ಕೊಡೋಣ."

"ಆಗಲಿ. ಬೇಕಾದಾಗ ಹಾಗೇ ಮಾಡೋಣ. ಆದರೆ ಈಗ ಆ ಪ್ರಸ್ತಾಪಬೇಡ. ತಾವು ಯಾವ ಯೋಚನೆಯನ್ನೂ ಮಾಡಬೇಡಿ."

"ಮೊದಲಿನ ಹಾಗೆಯೇ ಇರಲು ಸಾಧ್ಯವೇ ರಾಮಕೃಷ್ಣಯ್ಯನವರೇ"

"ಸಾಧ್ಯವೆಂದೇತಕ್ಕೆ ಕೇಳುವಿರಿ ಸ್ವಾಮಿ. ನಾನು ಎಂದಿದ್ದರೂ ತಮ್ಮ ಪಾದಸೇವಕ."

ಸ್ವಾಮಿಯ ಕಣ್ಣಿನಲ್ಲಿಯೂ ನೀರೂರಿತು ಎದ್ದು ರಾಮಕೃಷ್ಣಯ್ಯ ನನ್ನಪ್ಪಿದ. ರಾಮಕೃಷ್ಣಯ್ಯನ ಕಣ್ಣುಗಳಲ್ಲಿಯೂ ತೇವ ಮೂಡಿತು.

"ನಾನು ಮಾಡಿರುವುದು ಒಂದು ದೃಷ್ಟಿಯಲ್ಲಿ ನ್ಯಾಯ, ಒಂದು ದೃಷ್ಟಿಯಲ್ಲಿ ಅನ್ಯಾಯ. ಆದರೆ ಲಲಿತೆಯ ಸುಖಸಾಧನೆಗೆ ಮನಸ್ಸುಗೊಟ್ಟು ಅನ್ಯಾಯವನ್ನು ಸರಿಪಡಿಸುವೆ ರಾಮಕೃಷ್ಣಯ್ಯ. ಅವಳೇ ಇಂದಿನಿಂದ ನನ್ನ ಮಡದಿ. ಆ ಭಾವನೆ ಮಾಸಲು ಎಂದಿಗೂ ಎಡೆಕೊಡುವುದಿಲ್ಲ, ಲಲಿತೆಯ ವಿಷಯದಲ್ಲಿ ನಿಶ್ಚಿಂತರಾಗಿರಿ."

ಎಂದು ಕಳಕಳಿಯಿಂದ ನುಡಿದ. ಲಲಿತೆಯ ಭವಿಷ್ಯ ಇಂತು ಸುಸ್ಥಿರವಾದುದನ್ನು ಕೇಳಿ ರಾಮಕೃಷ್ಣಯ್ಯನ ಮನಸ್ಸು ಇಮ್ಮಡಿಯ ಆನಂದಕ್ಕೆ ಒಳಗಾಯಿತು. ಸಂಜೆ ಮುಳುಗಿ ಇರುಳು ಹುಟ್ಟಿರಲು ರಾಮಕೃಷ್ಣಯ್ಯ ಧಣಿಯ ಅಪ್ಪಣೆ ತೆಗೆದುಕೊಂಡು ಹೊರಟು ಹೋದ. ಅವನು ಹೋದ ಸ್ವಲ್ಪ ಹೊತ್ತಿನೊಳಗಾಗಿ ಲಲಿತಮ್ಮ ಬಂದು ಸ್ವಾಮಿಯ ಎದುರಿಗೆ ನಿಂತಳು. ಇಬ್ಬರೂ ಒಂದರಕ್ಷಣ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು ಮುಗುಳ್ನಗೆ ನಕ್ಕರು; ಮರುಕ್ಷಣವೇ ಗಾಢಾಲಿಂಗನ ಅವರಿಬ್ಬರನ್ನೂ ಒಂದುಗೂಡಿಸಿತು.

೭

ಮೂರು ವರ್ಷದೊಳಗೆ ಇತರರು ಹತ್ತು ವರ್ಷದಲ್ಲಿ ಕಲಿಯುವಷ್ಟನ್ನು ಸುಂದರಿ ಕಲಿತಳು. ಕುಳಿತು ನಿಂತು ಅಭಿನಯ ಮಾಡುವುದು ಹಾಡುವುದು ಅವುಗಳಲ್ಲದೆ ಲೋಯರ್ ಸೆಕೆಂಡರಿ ಈಯತ್ತೆಯಷ್ಟು ಪಾಠವೂ ಅವಳಿಗೆ ಆಗಿತ್ತು. ಮುಖದಲ್ಲಿ ಹದಿನೈದು ವರ್ಷದ ಲಾವಣ್ಯ ವಿರಾಜಿಸುವುದಕ್ಕಾರಂಭಿಸಿತು. ನೊಪಲೇ ಸುಂದರಿ—ಅದರ ಜತೆಗೆ ಈಗ ಬಳಕುವ ಯೌವನ. ಬೀದಿಯಲ್ಲಿ ಹೋಗಿ ಬರುವವರೆಲ್ಲರ ಕಣ್ಣೂ ಸುಂದರಿಯ ಮೇಲೇ ಇರುತ್ತಿದ್ದಿತು. ನೀತಿಜ್ಞರೆಂದು, ಧರ್ಮಜ್ಞರೆಂದು, ವೇಶ್ಯಾವಿರೋಧಕರೆಂದು ಖ್ಯಾತಿಗೊಂಡಿದ್ದವರು ಅನೇಕರು ಚಂದ್ರಮ್ಮನ ಮನೆಯ ಮುಂದೆ ಸುಳಿದಾಡುವುದಕ್ಕೆ

ಆರಂಭಿಸಿದರು. ಇಲ್ಲದ ಕೆಲಸವನ್ನು ಹೂಡಿಕೊಂಡು ಚಂದ್ರಮ್ಮನನ್ನು ಮಾತನಾಡಿಸಿಕೊಂಡು ಬರುವವರಿಗಂತೂ ಲೆಕ್ಕವೇ ಇಲ್ಲದೆ ಹೋಯಿತು.

ಸುಂದರಿಯ ವಿದ್ಯಾಭ್ಯಾಸ ಈ ರೀತಿ ಆಗುತ್ತಿದ್ದಂತೆ ಪುಟ್ಟುವಿನ ವಿದ್ಯಾಭ್ಯಾಸ ಬೇರೊಂದು ರೀತಿಯಲ್ಲಿ ಪರಿಸಮಾಪ್ತಿಗೊಂಡಿತ್ತು. ಚಂದ್ರಮ್ಮನ ಗೆಳೆಯರಿಗೆ ನಶ್ಯ ತಿಕ್ಕಿಕೊಡುವುದು, ಕಾಲೊತ್ತುವುದು, ವೀಳೆಯದೆಲೆಗೆ ಸುಣ್ಣ ಹಚ್ಚಿ ನಾರು ತೆಗೆದು ಮಡಿಸಿಕೊಡುವುದು, ಲಕ್ಷಣವಾಗಿ ಗಂಧವನ್ನು ಮಾಡುವುದು, ಹೂವು ಕಟ್ಟುವುದು, ಶ್ರುತಿಪೆಟ್ಟಿಗೆ ಬಾರಿಸುವುದು, ಇವುಗಳಲ್ಲೆಲ್ಲಾ ನಿಷ್ಣಾತನಾದ. ಯಾವ ಹೋಟಲಿನಲ್ಲಿ ಯಾವ ತಿಂಡೀ ಪದಾರ್ಥ ಚೆನ್ನು, ಯಾವ ಅಂಗಡಿಯಲ್ಲಿ ಉತ್ತಮ ಮದರಾಸಿನ ಪುಡಿನಶ್ಯ ದೊರೆಯುತ್ತದೆ, ಮೈಸೂರಿನ ಸಣ್ಣ ಚಿಗುರಿಗೆ (ವೀಳಯದೆಲೆ) ಎಲ್ಲಿಗೆ ಹೋಗಬೇಕು ಇವುಗಳ ವಿಚಾರ ಪುಟ್ಟುವನ್ನು ಕೇಳಿಬಿಟ್ಟರೆ ಮುಂದೆ ತೊಂದರೆಪಡುವ ಗೋಜೇ ಇರುತ್ತಿರಲಿಲ್ಲ.

ಚಂದ್ರಮ್ಮನ ಮನೆಗೆ ಸಾಮಾನ್ಯವಾಗಿ ಬರುತ್ತಿದ್ದವರು ಅವಳ ಆಪ್ತ ಗೆಳೆಯರು ಮತ್ತು ಕೆಲವು ವ್ಯವಸಾಯ ಬಂಧುಗಳು. ವ್ಯವಸಾಯ ಬಂಧುಗಳ ಮನೆಯ 'ಪುಟ್ಟೋಗಳ' ಪರಿಚಯವೂ ಅವನಿಗೆ ಆಗುತ್ತ ಬಂತು. ಒಂದೆರಡು ದಿವಸ ರತ್ನಾಸಾನಿಯ ಮನೆಯಲ್ಲಿಯೇ ಇದ್ದು ಅಲ್ಲಿ ಎಷ್ಟೋ ವಿಚಾರಗಳನ್ನು ಕಲಿತು ಬಂದಿದ್ದ. ಲಕ್ಷ್ಮಿಯ ಮನೆಯಲ್ಲಿ ಇದ್ದುಬಾರೆಂದು ಚಂದ್ರಮ್ಮನೇ ಕೆಲವು ದಿವಸ ಕಳುಹಿಸಿಕೊಟ್ಟಿದ್ದಳು ಹೀಗೆ 'ಗುರುಕುಲವಾಸ' ಮಾಡಿ ವಿಟಪುರುಷರ ಲಕ್ಷಣಗಳನ್ನೂ, ಅವರನ್ನು ಆಕರ್ಷಿಸುವ ಬಗೆಯನ್ನೂ, ಬಹಳ ಸೂಕ್ಷ್ಮವಾದ ಹಣಕಾಸಿನ ವಿಚಾರ ನಿಶ್ಚಯಿಸುವುದನ್ನೂ ಅವನು ತಿಳಿದುಕೊಂಡಿದ್ದ.

ಮೊದಮೊದಲು ಭಟ್ಟರು ಮಾಡಬಾರದ ಕೆಲಸಗಳಿಗೆಲ್ಲಾ ಪುಟ್ಟುವನ್ನು ಕರೆಯುತ್ತಿದ್ದಾಗ ಅವನ ಜೀವವೇ ಉಡುಗಿಹೋಗುತ್ತಿತ್ತು. ಮನಸ್ಸಿನಲ್ಲಿ ಅಸಹನೀಯವಾದ ವೇದನೆಯಾಗಿ, ಹೇಸಿಗೆಯ ಜೀವನದ ಬಗ್ಗೆ ಜಿಗುಪ್ಸೆ ಹುಟ್ಟುತ್ತಿತ್ತು. ಆದರೆ ವೆಂಕಟಮ್ಮನಿಯನ ಕೋರಡೆಯ ಪೆಟ್ಟುಗಳಿಗೆ ಹೆದರಿ ತನ್ನ ದುಃಖ, ಜಿಗುಪ್ಸೆ, ಕ್ರೋಧಗಳನ್ನು ತನ್ನಲ್ಲಿಯೇ ಅಡಗಿಸಿಕೊಂಡು ದುಡಿಯುತ್ತಿದ್ದ.

ಮಕ್ಕಳ ಪಾಡು ನೋಡಿ ರಾಮಕ್ಕನಂತೂ ತೀರಾ ಕಂಗೆಟ್ಟುಹೋದಳು. ಒಂದೆರಡು ಬಾರಿ ಚಂದ್ರಮ್ಮನಿಗೆ ಆ ವಿಚಾರ ಹೇಳಿ ಅವುಗಳನ್ನು ಸರಿಮಾಡ ಲೆತ್ನಿಸಿದಳು ಏನೂ ಸಾರ್ಥಕವಾಗಲಿಲ್ಲ. ಸಮಯವನ್ನು ಕಾದು ಉಪಾಯ ವಾಗಿ ಭಟ್ಟರ ಹತ್ತಿರ ಈ ಪ್ರಸ್ತಾಪವನ್ನು ಎತ್ತಿದಳು. ಅವರು

"ಅನ್ನ ಹಾಕುವವಳು ಅವಳು. ಅವಳು ಹೇಳಿದ ಕೆಲಸ ಮಾಡದಿದ್ದರೆ ಇನ್ನೇನು ಮಾಡಬೇಕು ರಾಮಕ್ಕಾ."

"ಆದರೆ ಇಂತಹ ಕೆಲಸಗಳನ್ನು ಮಾಡಿಸೋದಿಲ್ಲ, ವಿದ್ಯಾ ಕಲಿಸಿ ಮದುವೆ ಮಾಡುತ್ತೇನೆಂತ ಅವಳೂ ನೀವೂ ಹೇಳಲಿಲ್ಲವೇ ಭಟ್ಟರೇ?"

"ಇರಬಹುದು ರಾಮಕ್ಕಾ. ಆದರೆ ಚಂದ್ರಮ್ಮನ ಮನೆಯಲ್ಲಿ ಅದು ಸಾಧ್ಯವಿಲ್ಲವೆಂದು ನಿನಗೆ ಹೊಳೆಯಲಿಲ್ಲವೇ? ಕುಲಕ್ಕೆ ಬಂದ ಕಸಬು ಎಲ್ಲಿ ಬಿಡುವುದಕ್ಕಾಗುತ್ತೆ ಹೇಳು. ನಡೆದದ್ದು ನಡೆದುಕೊಳ್ಳಲಿ, ಸುಮ್ಮನಿರು. ನಿನಗೇನು ಆದ ನಷ್ಟ. ನಿನ್ನ ಕರ್ತವ್ಯ ನೀನು ಮಾಡಿದ್ದಿ. ಇನ್ನೆಷ್ಟು ಮಾಡ ಬೇಕು. ನಿನಗೂ ವಯಸ್ಸಾಯಿತು. ಕಣ್ಣು ಕೂಡಾ ಮಂಜಾಗುತ್ತಾ ಬಂತು."

ಎಂದು ಉತ್ತರ ಹೇಳಿ ಹೊರಟೇ ಹೋದರು. ರಾಮಕ್ಕನಿಗೆ ದಿಕ್ಕು ತೋರದಂತಾಯಿತು. 'ತಾನೇ ಕೈಯಾರ ದುಷ್ಟಜೀವನಕ್ಕೆ ಮಕ್ಕಳನ್ನು ದೂಡಿದೆನಲ್ಲಾ' ಎಂದು ಮರುಗಲಾರಂಭಿಸಿದಳು. ಆ ವೇಳೆಗೆ ತನಗಾಗಿದ್ದ ದೈಹಿಕ ದೌರ್ಬಲ್ಯವನ್ನು ನೆನೆದು ಮತ್ತೂ ಕೊರಗಲಾರಂಭಿಸಿದಳು. 'ಕೈ ಕಾಲು ಗಟ್ಟಿಯಾಗಿದ್ದರೆ ಮೊದಲಿನ ಹಾಗೆ ದುಡಿದಾದರೂ ಹಾಕಿ ಈ ಜೀವನ ದಿಂದ ಅವರನ್ನು ತಪ್ಪಿಸಬಹುದಾಗಿತ್ತು' ಎಂದು ದುಃಖಿಸುತ್ತಾ ತಲೆಯ ಮೇಲೆ ಕೈಹೊತ್ತು ಕುಳಿತುಕೊಂಡಳು.

ಮೊದಲು ಮೊದಲು ಯಾವ ಜೀವನ ಪುಟ್ಟುವಿಗೆ ಹೇಸಿಗೆಯಾಗಿ, ಭೀಭತ್ಸಕರವಾಗಿ ಕಂಡುಬರುತ್ತಿತ್ತೋ ಈಗ ಅದೇ ಜೀವನದಲ್ಲಿ ಅವನಿಗೆ ಸ್ವರ್ಗಸುಖ ಕಾಣಲಾರಂಭವಾಯಿತು. ತಲೆಯ ಮೇಲೆ ಫರ್ ಟೋಪಿ, ಉಡಲು ಉತ್ತಮ ಜರಿಯ ಪಂಚೆ, ಮೆಟ್ಟಲು ಮೆಟ್ಟಲು ಪೇಟೆಂಟ್ ತೊಗ ಲಿನ ಸ್ಲಿಪ್ಪರುಗಳು, ಉತ್ತಮವಾದ ಸರ್ಜ್ ಕೋಟು, ರೇಷ್ಮೆಯ ವಸ್ತ್ರಗಳು, ಸೇದಲು 'ಗೋಲ್ಡ್ ಫ್ಲೇಕ್' ಸಿಗರೇಟುಗಳು, ಕಿಸೆಯಲ್ಲಿ ಏನಿಲ್ಲೆಂದರೂ ಯಾವಾಗಲೂ ನಾಲ್ಕೈದು ರೂಪಾಯಿ ಈ ವೈಭವ ಎದುರಿಗೆ ನಿಂತಿರಲು

ಬಡತನದಗೋಳು ಬಾಳಿನಿಂದೇನು ಪ್ರಯೋಜನವೆಂದು ಅದನ್ನು ಧಿಕ್ಕರಿಸಿ ಬಿಟ್ಟಿದ್ದ. ತನ್ನ ಸೋದರಿಗೂ ಅದೇ ಮಂತ್ರವನ್ನುಪದೇಶಿಸಿ ಅವಳೂ ಆದಷ್ಟು ಕೈಗೆ ದೊರೆತಷ್ಟು—ಸುಖವನ್ನು ಬಾಚಿ ಹಾಕಿಕೊಳ್ಳಬೇಕೆಂದು ಬೋಧಿಸ ತೊಡಗಿದ. ಯಾವ ಸಿನೀಮಾದಲ್ಲಿ ನೋಡಿದರೂ ಪುಟ್ಟೊ ಅವನ ಗೆಳೆಯರು....ಯಾವ ನಾಟಕದಲ್ಲಿ ನೋಡಿದರೂ ಅವರದೇ ಓಡಾಟ....ನಾಯಕಸಾನಿಯರ ಗಾನ ನರ್ತನಗಳಿದ್ದ ಕಡೆಯಂತೂ ಅವರದೇ ಸರ್ವಾಧಿಕಾರ. ಕೆಲವು ದಿವಸಗಳೊಳಗಾಗಿ ಪುಟ್ಟೊ ನಗರದ ಒಬ್ಬ ಗಣ್ಯ ಪುರುಷನಾಗಿ, ಎಲ್ಲರ ಗಮನವನ್ನೂ ಸೆಳೆಯಹತ್ತಿದ. ಲಾಯರುಗಳು, ವರ್ತಕರು, ನಟರು, ಕಾಲೇಜು ವಿದ್ಯಾರ್ಥಿಗಳು, ವೃತ್ತಪತ್ರಿಕಾ ಸಂಪಾದಕರು, ಯಾರ ಜೊತೆಯಲ್ಲಿ ನೋಡಿದರೂ ಪುಟ್ಟೊ. ಅವನಿಗೆ ತಿಳಿಯದಿದ್ದವರೇ ಇರಲಿಲ್ಲ—ತಿಳಿಯದಿದ್ದ ವಿಷಯವೇ ಇರಲಿಲ್ಲ.

ಭಟ್ಟರಿಗಂತೂ ಪುಟ್ಟುವೆಂದರೆ ಪ್ರಾಣವಾಗಿಬಿಟ್ಟಿತ್ತು. ವೇಶ್ಯಾ ಸಮೂಹದಲ್ಲಿ ಅವನು ದೊರಕಿಸಿಕೊಂಡಿದ್ದ ವಿಶ್ವಾಸ ಗೌರವ ಚಂದ್ರಮ್ಮನ ಪ್ರೇಮವನ್ನೂ ಅವನ ವಿಚಾರದಲ್ಲಿ ಹೆಚ್ಚಿಸಿತ್ತು. ಸೂರ್ಯಾಸ್ತವಾಯಿತೆಂದರೆ ಸಮರಾತ್ರಿಯವರೆಗೂ ಪುಟ್ಟುವಿಗೆ ಬಿಡುವೇ ಇಲ್ಲ. ಆ ಹೊತ್ತಿನಲ್ಲಿಯೇ ಕೆಲವು ದಿವಸಗಳು ಚಂದ್ರಮ್ಮನ ಮನೆಯಲ್ಲಿ ಸಂಗೀತ ಕಛೇರಿಗಳು ನಡೆಯುತ್ತಿದ್ದವು. ಆಗಂತೂ ಅವನಿಗೆ ಉಸಿರಾಡಲೂ ಅವಕಾಶವಾಗುತ್ತಿರಲಿಲ್ಲ. ಚಂದ್ರಮ್ಮನ ರೂಪಕ್ಕೆ, ಲಾವಣ್ಯಕ್ಕೆ ಹೇಗೆ ಜನರು ಮರುಳಾಗಿದ್ದರೊ ಹಾಗೆ ಆಕೆಯ ಗಾನವಿದ್ಯಾನೈಪುಣಕ್ಕೂ ಜನರು ಮರುಳಾಗಿದ್ದರು ಆ ಉತ್ತರ ವಯಸ್ಸಿನಲ್ಲಿಯೂ ಆಕೆಯು ಎರಡು ತಂಬೂರಿಗಳನ್ನು ಶ್ರುತಿಗೆ ಹೂಡಿಕೊಂಡು ಹಾಡಲು ಕುಳಿತಳೆಂದರೆ ಶ್ರಾವಕರಿಗೆ ಇಹ-ಪರ ಲೋಕಗಳೆರಡೂ ಮರೆತು ಹೋಗುತ್ತಿದ್ದವು. ಆಕೆಯು ಮೈಮರೆತು, ಮನತೆರೆದು ಹಾಡುತ್ತಿದ್ದುದರಿಂದ ಉಪಾಸನಾದೇವತೆ ನಿರ್ಭಯದಿಂದ ಒಲಿಯುತ್ತಿದ್ದಳು. ಒಂದೊಂದು ದಿವಸ ಸುಂದರನನ್ನೂ ಜೊತೆಯಲ್ಲಿ ಕೂರಿಸಿಕೊಂಡು ಹಾಡುತ್ತಿದ್ದಳು. ಕೊನೆ ಕೊನೆಗೆ ಸುಂದರನೇ ಹಾಡುವುದೆಂದು ನಿಶ್ಚಯವಾಗಿ ಹೋಯಿತು.

ಚಂದ್ರಮ್ಮನ ಗಾನವಿದ್ಯಾಕೌಶಲ್ಯ ಎಷ್ಟೋ ಮಂದಿ ಪ್ರಸಿದ್ಧ ಗಾಯಕರನ್ನೂ ಆಕರ್ಷಿಸುತ್ತಿತ್ತು. ದಕ್ಷಿಣಾದಿ ಗಾಯನ ಪದ್ಧತಿಯ ಮರ್ಮ

ವನ್ನರಿಯಲು ಬರುತ್ತಿದ್ದ ಉತ್ತರದ ಗವಯ್‌ಗಳಂತೂ ಆಕೆಯನ್ನು ಮುಕ್ತ ಕಂಠದಿಂದ ಹೊಗಳಿ ಹೋಗುತ್ತಿದ್ದರು. ಚಂದ್ರಮ್ಮನ ಶಿಷ್ಯಳ ಗಾನವನ್ನು ಕೇಳಿದವರೆಲ್ಲಂತೂ ವಿದ್ವಾಂಸರು ದಿಗ್ಭ್ರಾಂತರಾಗಿ ಹೋದರು. 'ಇಂತಹ ಶಾರೀರ, ವಿದ್ಯೆ, ರೂಪಗಳು ಒಬ್ಬಳಲ್ಲಿಯೇ ಸಂಗಮವಾಗುವುದು ಸಾಧ್ಯವೆ?' ಎಂದು ಅವರು ಆಶ್ಚರ್ಯಪಡುವಂತಹ ಪ್ರಗತಿಯನ್ನು ಗಾನವಿದ್ಯೆಯಲ್ಲಿ ಸುಂದರೂ ತೋರಲಾರಂಭಿಸಿದಳು. ರಾಗಗಳ ಆಲಾಪನೆಗೆ ಹೊರಟುಬಿಟ್ಟ ರಂತೂ ಕಟ್ಟುಕಟ್ಟಳೆಗಳನ್ನು ಹರಿದೊಗೆದು ಆ ರಾಗದ ಜೀವರಸದ ಅಮೃತ ವರ್ಷವನ್ನೇ ಕರೆಸಿಬಿಡುತ್ತಿದ್ದಳು. ಕೃತಿಗಳ ಗಾಯನದಲ್ಲಿಯೂ ತನ್ನದೇ ಆದ ಒಂದು ಮಾರ್ಗ. ಭಾವರತ್ನಗಳಾದ ವಿದ್ವಾನ್ ವಾಸುದೇವಾಚಾರ್ಯರ ಕೃತಿಗಳ ಹಾಡಿಕೆಗೆ ಹೊರಟುಬಿಟ್ಟರಂತೂ ಶ್ರಾವಕರು ಸಾಕ್ಷಾತ್ ಗಂಧರ್ವ ಗಾನವನ್ನು ಕೇಳುತ್ತಿದ್ದಂತೆ ಭಾವಿಸುವರು. ಕೀರ್ತನೆಯ ಅರ್ಥಕ್ಕೆ ಅನು ಗುಣವಾದ ರಸವನ್ನು ಹೊಂದಿಕೊಂಡು, ಯಾಂತ್ರಿಕ ಸಾಧನವಾದ ಸ್ವರ ಪ್ರಸ್ತಾರವನ್ನು ರಸಕ್ಕೆ ಅಣಗಿಸಿ ಹಾಡುವಳು. ಕವಿ-ಗಾಯಕನೊಂದಿಗೆ ಒಂದಾಗಿ, ಒಮ್ಮೆ ಬೇಡುವಳು, ಒಮ್ಮೆ ಅಂಗಲಾಚುವಳು, ಒಮ್ಮೆ ಮುನಿಯು ವಳು, ಒಮ್ಮೆ ಪ್ರಶಾಂತಳಾಗುವಳು, ಒಮ್ಮೆ ಎಲ್ಲವನ್ನೂ ವರ್ಜಿಸಿ ಸರ್ವಸಂಗ ಪರಿತ್ಯಾಗ ಭಾವವನ್ನು ಬೀರುವಳು. ಹುಡುಗಿಯ ರೂಪರಸವನ್ನು ಸವಿ ಯುತ್ತಾ ತಮ್ಮ ಮನಸ್ಸಿನಲ್ಲಿ ಹುಟ್ಟಿದ್ದ ಕಾಮುಕಲ್ಪನೆಗೆ ಪ್ರಚೋದನೆ ಕೊಡಲು ಬರುತ್ತಿದ್ದ ಎಷ್ಟೋ ಮಂದಿ ಆಕೆಯ ಗಾನಕ್ಕೆ ಮನಸೋತು, ತನು ಸೋತು, ಸೋಲನ್ನು ಒಪ್ಪಿಕೊಂಡು ಶುದ್ಧ ಮನಸ್ಕರಾಗಿ ಹಿಂತಿರುಗುತ್ತಿದ್ದರು.

ಸುಂದರಿ ಹಾಡುವುದಕ್ಕೆ ಕುಳಿತರೆ ಸ್ವಯಂ ಚಂದ್ರಮ್ಮನೇ ತಂಬೂರಿ ಮಾಟುವಳು. ಅವಳ ಗಾಯನದಲ್ಲಿ ಮಿಂಚಿನಂತೆ ಕಾಣುಬರುತ್ತಿದ್ದ ತನ್ನ ಗುರುಗಳಾದ ಅಪ್ಪಯ್ಯದೀಕ್ಷಿತರ ಗಮಕಗಳೂ, ಸ್ವರಪ್ರಸ್ತಾರವೂ, ರಸಾ ವೇಶವೂ ಚಂದ್ರಮ್ಮನ ಹೃದಯದಲ್ಲಿ ಗೌರವವನ್ನು ಬಿತ್ತಲಾರಂಭಿಸಿದವು. ಶಿಷ್ಯ ರನ್ನು ಸಿದ್ಧಗೊಳಿಸಿ ಸಿದ್ಧಗೊಳಿಸಿ ಅವರು ಯಾರು ಕೈಗೆಹತ್ತದೆ ಹತ್ತು ಕೀರ್ತನೆ ಗಳು ಬಂದೊಡನೆಯೇ ಕಛೇರಿಮಾಡಲು ಆರಂಭಿಸುತ್ತಿದ್ದುದನ್ನೂ, ಇಲ್ಲವೆ ಯಾರನ್ನಾದರೂ ಹೊಂದಿಸಿಕೊಂಡು ಅವರೊಂದಿಗೆ ಓಡಿಹೋಗುತ್ತಿದ್ದುದನ್ನೂ ನೋಡಿನೋಡಿ ಬೇಸತ್ತಿದ್ದ ಚಂದ್ರಮ್ಮನಿಗೆ ತನ್ನ ಹೆಸರು ಹೇಳುವಂತಹ

ಶಿಷ್ಯಳು ದೊರೆತುದು ದೊಡ್ಡ ಹೆಮ್ಮೆಯ ವಿಷಯವಾಗಿತ್ತು. ಸುಂದರನ 'ದೇವಗಾಂಧಾರಿ' ಯಲ್ಲಿದ್ದ ಗಾಂಭೀರ್ಯವೂ 'ಖರಹರಪ್ರಿಯ' ದಲ್ಲಿದ್ದ ದೈನ್ಯವೂ 'ಕಲ್ಯಾಣಿ'ಯಲ್ಲಿದ್ದ ಶಾಂತವೂ ಅವಳ ಜೀವನದ ಬಗ್ಗೆ ದೊಡ್ಡ ಸಮಸ್ಯೆಯನ್ನೇ ತಂದೊಡ್ಡಿದ್ದವು.

"ಮಾತು ಕೊಟ್ಟಂತೆ ಮದುವೆಮಾಡಿ ಯೋಗ್ಯನಾದ ಗಂಡನೊಂದಿಗೆ ಬಾಳುವೆ ಮಾಡಿಕೊಂಡು ನೆಮ್ಮದಿಯಾಗಿರೆಂದು ಕಳುಹಿಸಿ ಕೊಡಲೇ" ಎಂದು ಕೊಳ್ಳುವಳು. ಮರುಕ್ಷಣವೇ

"ಇಂತಹ ವಿದ್ಯೆ—ಮದುವೆಯಿಂದ ವ್ಯರ್ಥವಾಗಿಬಿಡುವುದು. ಮಕ್ಕಳು ಹಡೆಯುವ ಯಂತ್ರವಾಗಿ ತನ್ನ ವಿದ್ಯೆಯನ್ನು ನಿರರ್ಥಕ ಮಾಡಿಕೊಂಡ ಬಿಡುವಳು" ಎಂದು ತನ್ನಲ್ಲಿ ಹುಟ್ಟಿದ ಪ್ರಶ್ನೆಗೆ ಉತ್ತರ ಹೇಳಿಕೊಳ್ಳುವಳು.

"ಅಲ್ಲದೆ ನನ್ನ ವಂಶದ ಗತಿಯೇನು? ವಂಶದ ಹೆಸರು ಉಳಿಯ ಬೇಕೆಂದು ಇವಳನ್ನು ಕಾಪಾಡಿ ಬೆಳೆಸಿದೆ. ಇವಳು ಮದುವೆಯಾಗಿ ಗಂಡನ ಮನೆಗೆ ಹೋದರೆ ನನಗೆ ಬಂದ ಭಾಗ್ಯವೇನು?"

ಎಂದು ತನ್ನ ಉದ್ದೇಶವನ್ನು ಜ್ಞಾಪಿಸಿಕೊಳ್ಳುವಳು. ಒಂದು ದಿವಸ ಭಟ್ಟರೊಂದಿಗೆ ಈ ಪ್ರಸ್ತಾಪವೆತ್ತಿದಾಗ

"ಕುಲಕ್ಕೆ ಬಂದಂತೆ ಮಾಡಿಬಿಡು ಚಂದ್ರಾ" ಎಂದು ಸೂಚಿಸಿದರು.

"ಅಂದ್ರೇನು ಭಟ್ಟರೇ. ಗೆಜ್ಜೆಪೂಜೆಗೆ ಮುಹೂರ್ತ ನೋಡುತ್ತೀರೇನು?"

"ನೋಡೋದೇ. ನೀನು ಎಲ್ಲಾ ಸಿದ್ಧತೆ ಮಾಡಿಕೋ? ಮುಂದಿನ ವ್ಯವಹಾರ ನೋಡಿಕೊಳ್ಳೋದಿಕ್ಕೆ ನಾನು ಇದ್ದೇನಲ್ಲ."

"ಅಂದ್ರೇನು. ನಿಮಗೇ ಗೆಜ್ಜೆಪೂಜೆ ಆಗಬೇಕೇನು" ಎಂದು ನಗುತ್ತಾ ಕೇಳಿದಳು. ಭಟ್ಟರು

"ಹುಚ್ಚೀ. ನನಗೇಕೆ ಹೇಳು ಆ ಯೋಚನೆ. ಚಿಕ್ಕಪುಟ್ಟವರಿರುವಾಗ ಅವರ ದಾರಿಯಲ್ಲಿ ಅಡ್ಡಲಾಗಿ ಏತಕ್ಕೆ ಬರಲಿ. ನನಗೆ ಹೇಗೂ ನೀನು ಇದ್ದೀಯಲ್ಲಾ."

"ಇಂತಹ ಬಿನ್ನಾಣದ ಮಾತಿಗೇನಂತೆ! ವರ ಯಾರನ್ನು ಗೊತ್ತು ಮಾಡಿದ್ದೀರಿ."

" ದರಖಾಸ್ತು ನೋಡೋಣ ತಡೀ. ನಿನ್ನಲ್ಲಿ ಯಾರು ಬಂದಿದ್ದರು ........"

" ಶಂಕರಪ್ಪನ ಬಾಧೆ ತಡಿಯುವುದಕ್ಕಾಗದ ಹಾಗಾಗಿದೆ."

" ಅವನ ಸುದ್ದಿ ಬಿಟ್ಟು ಮಾತನಾಡು. ಶುದ್ಧ ಭಿಕಾರಿ....ಅವನನ್ನು ಕಟ್ಟಿಕೊಂಡು ನಮಗೆ ಆಗಬೇಕಾದ್ದೇನು........ಗಣೇಶರಾಯನ ದರಖಾಸ್ತು ಬಂದಿತ್ತೋ ? "

" ಬಂದಿತ್ತು. ಆದರೆ ಅವರೇ ! "

" ಯಾಕಾಗಬಾರದು. ಅವರಪ್ಪ ಮಾಡಿಟ್ಟಿದ್ದ ಆಸ್ತಿಯಲ್ಲಿ ಹಾಗೂ ಹೀಗೂ ಎರಡು ಲಕ್ಷ ಕರಗಿತು. ಇನ್ನೂ ೨-೩ ಲಕ್ಷ ಉಳಿದಿದೆ. ಅದು ಅಲ್ಲೀ ಇಲ್ಲೀ ಅಕಲಾಯುವಾಗಿ ಏತಕ್ಕೆ ಹೋಗಬೇಕು."

" ಅದೇನೋ ಸರಿ. ಆದರೆ ನಮ್ಮ ಸುಂದರೂಗೆ ಅವರು ತಂದೆ ಆಗೋದಿಲ್ವೇ ? "

"ಹುಚ್ಚೀ—ನಿನಗೇನು ಮಂಕು ಮುಚ್ಚಿತು ಹೇಳು. ಯಾರು ತಂದೆ—ಯಾರು ಮಗಳು. ಸುಂದರೂ ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳಾಗಿದ್ದರೆ ಆ ಯೋಚನೆ. ಅವಳು ಯಾರೋ—ನೀನು ಯಾರೋ ? ದತ್ತು ಮಾಡಿಕೊಂಡರೆ ಋಣಾನುಬಂಧ ಬೆಳೆಯಿತೆ ? "

" ಹಾಗಾದರೆ ಅವರೇ ಆಗಲಿ ಅನ್ನುತ್ತೀರೇನು. ಆ 'ಪೇಪರು ಮಾಡುವ' ಅನಂತರಾಯನ ತೊಂದರೆ ಜಾಸ್ತಿಯಾಗಿದೆ."

" ಅವರೆಲ್ಲಾ ಮುಂದಕ್ಕೆ ಇದ್ದೇ ಇದ್ದಾರೆ. ಪೇಪರು ಮಾಡುವವರೆಲ್ಲಾ ಪಾಪರ್ ಆಸಾಮಿಗಳು. ಅವರ ಮಾತು ಕಥೆ ನಂಬಿ ಮರುಳಾದೀಯಾ ? ಇರುವ ಕೂಳು ಕಳೆದುಕೊಂಡು ನಿತ್ಯಯಾತ್ರೆ ಹೊರಟರೂ ಅನ್ನುವ ಹಾಗಾದೀತು."

" ಹಾಗಾದರೆ ಗಣೇಶರಾಯರಿಗೆ ಒಪ್ಪಿಗೆ ಕೊಡಲೇನು ? "

" ಕೊಡು. ಆದರೆ ಮೂರು ತಿಂಗಳ ಮೇಲೆ ಆಗುವುದಿಲ್ಲಾ ಎಂದು ಖಂಡಿತವಾಗಿಯೂ ಹೇಳಿಬಿಡು. ನನ್ನ ದೃಷ್ಟಿಯಲ್ಲಿ ಒಂದೆರಡು ಭಾರೀಕುಳಗಳಿವೆ. ನಾನು ಪುಟ್ಟೂನ ಬಿಟ್ಟು ಆ ಹಕ್ಕಿಗಳನ್ನು ಹಿಡಿಸುತ್ತೇನೆ."

" ಹಣ........"

"ನೋಡು. ಮೂರು ಸಾವಿರಕ್ಕಿಂತ ಕಡಿಮೆ ಆಗುವುದಿಲ್ಲವೆಂದು ಖಂಡಿತಾ ಹೇಳಿಬಿಡು. ಐದುಸೇರು ಭಂಗಾರವಾದರೂ ಇಡಬೇಕು. ನಿನ್ನ ಘನತೆಯೇನು—ಗಣೇಶರಾಯನ ಘನತೆಯೇನು—ಎಲ್ಲಾ ಪೊಗದಸ್ತಾಗಿ, ಅಕರಾಸ್ತೆಯಾಗಿ ಆಗಬೇಕೋ ಬೇಡವೋ ?"

"ಮಿಕ್ಕ ಖರ್ಚು ಬಾಬತು."

"ಅದೂ ಅವನೇ ನೋಡಿಕೊಳ್ಳಬೇಕು. ಶೋಭನ ಮಾಡಿಕೊಳ್ಳುವವನು ಅವನು, ಖರ್ಚು ನಾನು ಮಾಡಲೇ ? ತಾಘೇಗೆ ತಿರುಮಕೂಡಲ ನರಸೀಕಡೆಯುವರಿಗೆ ಬರಹೇಳಿ ಕಾಗದ ಬರಿ. ನಗರ್ತರ ಪೇಟೆ ಆಲವೇಲೂ ಮನೆಯವರ ಸಂಗೀತವಾಗಲಿ ಒಂದು ದಿವಸ. ದೇವರಾಯ ಸಮುದ್ರದ ಸುಬ್ಬನಿಗೆ ಹೇಳಿಕಳುಹಿಸಿದರೆ ಅಡಿಗೆ ಊಟದ ವ್ಯವಸ್ಥೆ ನೋಡುಕೊಳ್ಳುತ್ತಾನೆ—ಇದೆಲ್ಲಾ ಸರಿ, ಮೊದಲು ಸುಂದರೂನ ಒಪ್ಪಿಸಿದ್ದೀಯೋ ?"

"ಒಪ್ಪಿಸುವುದೇನು ? ನನ್ನ ಮಾತಿಗೆ ಅವಳು ಪ್ರತಿಹೇಳುವುದಿಲ್ಲ. ನಾನು 'ಹೂಂ' ಅಂದರೆ ತಾನೂ 'ಹೂಂ' ಅನ್ನುತ್ತಾಳೆ.

"ಹಾಗಾದರೆ ಸರಿ. ಪುಟ್ಟೂಗೆ ಒಂದು ಬೈಸಿಕಲ್ ಬೇಕಂತೆ........... ಈ ಸಂದರ್ಭದಲ್ಲಿಯೇ ಅದನ್ನೂ ಕೊಡಿಸಿಕೊಟ್ಟು ಬಿಡು. ಆ ಹುಡುಗ ಏನಾದರೂ ಕೀಟಲೆ ಮಾಡಿಯಾನು ?"

"ಹಾಗೇ ಆಗಲಿ" ಎಂದು ನಗುತ್ತಾ ಚಂದ್ರಮ್ಮ ಒಳಕ್ಕೆ ಹೋದಳು. ಭಟ್ಟರು ಮುಂದಿನ ಕೆಲಸಕಾರ್ಯಗಳನ್ನು ಚಿಂತಿಸುತ್ತಾ, ಶುಭಮುಹೂರ್ತಕ್ಕೆ ತಕ್ಕ ದಿನವನ್ನು ಗುಣಿಸುತ್ತಾ ಅಲ್ಲಿಯೇ ಕುಳಿತರು. ಚಂದ್ರಮ್ಮನ ಮನೆಯಲ್ಲಿ ತನಗಿದ್ದ ಸ್ಥಾನವೂ ಪ್ರಾಧಾನ್ಯವೂ ನೆನಪಿಗೆ ಬಂದು ಅವರಿಗೇ ನಗು ಬಂದಿತು. ಕೊರಳಲ್ಲಿ ಕೊರೆಯುತ್ತಿದ್ದ ರುದ್ರಾಕ್ಷಿಮಾಲೆಯನ್ನು ಸರಿಪಡಿಸಿಕೊಳ್ಳುತ್ತಾ ಚಿತ್ರಮಯ ಜಗತ್ತಿನ ನಡೆವಳಿಕೆಯನ್ನು ನೆನೆಯುತ್ತಾ, ತಾವು ದೃಷ್ಟಿಯಿಟ್ಟಿರುವ ಹಕ್ಕಿಗಳ ವಿಚಾರ ಚಿಂತಿಸುತ್ತಾ 'ಧಿಕ್‌ಬಲಂ ಕ್ಷತ್ರಿಯ ಬಲಂ, ಬ್ರಹ್ಮಬಲಂ ಬಲಂ' ಎಂದು ತಮ್ಮಲ್ಲಿಯೇ ಹೇಳಿಕೊಂಡು, ತೊಟ್ಟಿಯಲ್ಲಿದ್ದ ಸೋಪಾದ ಮೇಲೆ ಕಾಲು ಚಾಚಿಕೊಂಡು ಮಲಗಿದರು. ಸ್ವಲ್ಪ ಹೊತ್ತಿನಲ್ಲಿಯೇ ಭಟ್ಟರ ಗೊರಕೆ ಕಂಭ ಬಾಗಿಲುಗಳನ್ನೆಲ್ಲ 'ಗಡಗಡ' ನಡುಗಿಸಲಾರಂಭಿಸಿತು.

ಚಂದ್ರಮ್ಮನ ಮನೆ ಇಂದ್ರಭವನವಾಗಿ ಬಿಟ್ಟಿತು. ಇಂದ್ರಭವನದೊಂದಿಗೆ ಸ್ಪರ್ಧೆಮಾಡಹೇಳಸುವಂತೆ ವಿದ್ಯುದ್ದೀಪದಲಂಕಾರ ಮನೆಯ ಸೌಂದರ್ಯವನ್ನು ಎತ್ತಿ ಕಾಣಿಸುತ್ತಿತ್ತು. ಮೆರವಣಿಗೆ ಸಂಧ್ಯಾಕಾಲ ಆರೂವರೆಗೆ ಹೊರಟು ಒಂಬತ್ತು ಘಂಟೆಯ ಒಳಗಾಗಿ ಮನೆಯನ್ನು ಸೇರಬೇಕೆಂದು ಮೊದಲೇ ನಿಶ್ಚಯವಾಗಿದ್ದರೂ ಇನ್ನೂ ಪೂರ್ವಸಿದ್ಧತೆಯಲ್ಲೇ ಇದ್ದಿತು. ೨೦೦ ಪೆಟ್ರೋಮಾಕ್ಸ್ ದೀಪಗಳು–ಬ್ಯಾಂಡಿನವರು–ವಾಲಗದವರು ಬಾಣ ಬಿರುಸಿನವರು ಎಲ್ಲರೂ ಸಿದ್ಧರಾಗಿ ನಿಂತಿದ್ದರು. ಮನೆಯ ಮುಂದೆ, ಹೂವಿನ ಅಲಂಕಾರಗೊಂಡಿದ್ದ ಸುಂದರವಾದ ದೊಡ್ಡ ಬ್ಯೂಕ್ ಮೋಟಾರ್ ಗಾಡಿ.

ಅಂತೂ, ಇಂತೂ ಏಳು ಘಂಟೆಗೆ ಸರಿಯಾಗಿ ಮೆರವಣಿಗೆ ಹೊರಟಿತು. ವಧುವಿನ ಮುಖದಲ್ಲಿ ಸನ್ನಿವೇಶದ ಉದ್ರೇಕ, ತೈಲಾಭ್ಯಂಜನದ ಪ್ರಭೆಯಿಲ್ಲದೆ ನಾಚಿಕೆಯಿಂದಲೂ ನಸುಗೆಂಪು ಮೂಡಿತ್ತು. ಮೊದಲೇ ಮುದ್ದಾದ ಮುಖಕ್ಕೆ ಬೆಲೆಬಾಳುವ ಸೀಮೆ ಕಮಲದ ಮೂಗುತಿ, ಒಲೆಗಳು. ಕೊರಳಲ್ಲಿ ನಾಲ್ಕು ಎಳೆಯ ಸರ. ಕೈತುಂಬ ಬಳೆಗಳು. ಉಟ್ಟಿದ್ದ ನೀಲಿಬಣ್ಣದ ಬನಾರಸು ಪೀತಾಂಬರಕ್ಕೆ ತೊಟ್ಟಿದ್ದ ಗುಲಾಬಿ ಬಣ್ಣದ ಕುಪ್ಪುಸ ಮೆರಗು ಕೊಟ್ಟಿತ್ತು. ನಾಚಿಕೆಯಿಂದ ತಲೆಬಾಗಿ ಕುಳಿತಿದ್ದ ವಧುವನ್ನು ಕದ್ದು ಕದ್ದು ನೋಡುತ್ತಾ ನೋಡುತ್ತಾ ಶ್ಯಾಮಲವರ್ಣದ ವರ ಆದಷ್ಟು ಒಪ್ಪುವಂತೆ ಅಲಂಕೃತನಾಗಲು ಪ್ರಯತಿಸ್ನಿದ. ತಲೆಯ ಮೇಲಿದ್ದ ಬೂಟಾದಾರಿಯ ರುಮಾಲು, ತೊಟ್ಟಿದ್ದ ನಸ್ಯದ ವರ್ಣದ ಸರ್ಜುಕೋಟಿಗೆ ಒಪ್ಪದಿದ್ದರೂ ಒಂದು ಬಗೆಯ 'ಡೌಲನ್ನು' ತೋರುತ್ತಿದ್ದಿತು. ಅವನ ಕಿವಿಯಲ್ಲಿದ್ದ ಹಲಗೆ ವಜ್ರದ ಹತ್ತು ಕಡಕುಳು ಮುಖಕ್ಕೆ ಕಳೆಯನ್ನು ಕೊಟ್ಟಿದ್ದವು. ಉತ್ತರೀಯವನ್ನು ಹೊದೆದಿದ್ದ ರೀತಿ ವರನ ಗಾಂಭೀರ್ಯಕ್ಕೆ ಪುಷ್ಟಿಕೊಡುತ್ತಿದ್ದಿತು.

ಮೆರವಣಿಗೆ ವಿಜೃಂಭಣೆಯಿಂದ ಹೊರಟಿತು. ಬಾಣ ಬಿರುಸಿನವರು ಆಟಾಟೋಪ ಮಾಡುತ್ತಾ ಮುಂದೆ ಹೊರಟರು. ಹೆಜ್ಜೆ ಹೆಜ್ಜೆಗೂ ಅವರು ಹೊಡೆಯುತ್ತಿದ್ದ 'ಗಡಾಬಾಜಿ'ನ ನಾದ ಎದೆಯೊಡೆಯುತ್ತಿದ್ದರೂ ಅದು ಆಗಸದಲ್ಲಿ ಛಿವ್ರಛಿವ್ರವಾಗಿ ಹಲವು ಬಣ್ಣಗಳ ನಕ್ಷತ್ರಗಳಾಗಿ ಕೆಳ ಗುದುರುತ್ತಿದ್ದುದು ಹರ್ಷದಾಯಕವಾಗಿದ್ದಿತು. ಅವರ ಹಿಂದೆ ಬ್ಯಾಂಡಿ

ನವರು ಮಿನಮಿನ ಮಿಂಚುತ್ತಿದ್ದ ತಮ್ಮ ಹಿತ್ತಾಳೆಯ ವಾದ್ಯಗಳನ್ನು ಬಾರಿಸುತ್ತ ಹೊರಟರು. ಅವರ ಹಿಂದೆ ಸ್ವಲ್ಪ ದೂರದಲ್ಲಿ ಚಿಕ್ಕಮುನಿಸ್ವಾಮಯ್ಯ ಅವನ ತಮ್ಮ–ಇವರಿಬ್ಬರ ಜೊತೆ ಚಿನ್ನದ ನಾಗಸ್ವರ. ಅವರ ವಾದ್ಯ ಕೇಳಲು ಒಂದು ಗುಂಪು, ತಾಳವನ್ನು ಹಾಕುತ್ತಿದ್ದವರು ಕೆಲವರು, 'ಅಹ್ಹಹಾ' ಎಂದು ಆಶ್ಚರ್ಯವನ್ನು ಸೂಚಿಸುತ್ತಿದ್ದವರು ಕೆಲವರು, ' ಭೇಷ್ ಭೇಷ್ ' ಎಂದು ಶ್ಲಾಘನೆಯನ್ನು ಸೂಚಿಸುತ್ತಿದ್ದವರು ಕೆಲವರು. ಪ್ರಾಯಶಃ ಅವರಲ್ಲಿ ಅನೇಕರು ಮುನಿಸ್ವಾಮಯ್ಯನ ಶಿಷ್ಯ ವರ್ಗದವರೆಂದು ಕಾಣುತ್ತದೆ. ನಾಗಸ್ವರದ ಹಿಂದೆ ತಿರುಮುಕೂಡಲ ನರಸೀ, ಅವಳ ಶಿಷ್ಯವರ್ಗದ ನರ್ತನ. ಅದನ್ನು ನೋಡುವುದಕ್ಕಂತೂ ಅರ್ಧ ಊರೇ ಅಲ್ಲಿದ್ದಂತಿತ್ತು. ಜನ ಸಂದಣಿಯಲ್ಲಿ ಮೆಲ್ಲನೆ ಜಾಗಬಿಡಿಸಿಕೊಂಡು ಹೇಗಾದರೂ ನರಸಿಯನ್ನು ಸೋಂಕಬೇಕೆಂದು ದುಡುಕುತ್ತಿದ್ದ ರಸಿಕರಿಂದ ನರ್ತನ ನೋಡುತ್ತಿದ್ದವರಿಗೆ ಕೊಂಚ ತೊಂದರೆಯಾಗುತ್ತಿದ್ದರೂ, ಅವರು ತಮ್ಮ ಕಣ್ಣಿಗೆ ದೊರೆಯುತ್ತಿದ್ದ ಹಬ್ಬದಲ್ಲಿ ತೊಂದರೆಯನ್ನು ಧಾರಾಳದೃಷ್ಟಿಯಿಂದ ಮರೆತು ಬಿಟ್ಟಿದ್ದರು. ನರ್ತಕರ ಹಿಂದುಗಡೆಯೇ ವಧೂವರರ ರಥ. ರಥದ ಬಾಗಿಲನ್ನು ಹಿಡಿದುಕೊಂಡು ಪುಟ್ಟು ಅಲಂಕೃತನಾಗಿ ರಥದ ಜತೆ ಬರುತ್ತಿದ್ದನು. ಅವರ ಅಕ್ಕಪಕ್ಕದಲ್ಲಿ ದೀಪದವರು. ರಥದ ಹಿಂದೆ ಚಂದ್ರಮ್ಮ, ಅವಳ ವೃತ್ತಿ ಭಗಿನಿಯರು ಮಂಗಳ ದ್ರವ್ಯಗಳನ್ನು ಹೊತ್ತು ತರುತ್ತಿದ್ದರು. ಊರಿನ ರೂಪರಾಶಿಯೇ ಒಂದೆಡೆ ಸೇರಿರಲು ಅದನ್ನು ನೋಡಲು ರಸಿಕರ ತಂಡ ತಂಡವೇ ಅವರ ಅಕ್ಕ ಪಕ್ಕವನ್ನು ಬಳಸಿಕೊಂಡಿತ್ತು.

ಎದುರಿಗೆ ಬರುತ್ತಿದ್ದ ಸ್ವಾಮಿ, ವಾಸು ಇಬ್ಬರೂ ಒಂದೆಡೆ ನಿಲ್ಲಬೇಕಾಯಿತು. ಮೆರವಣಿಗೆಯೊಂದಿಗೆ ಬರುತ್ತಿದ್ದ ಜನಸಂದಣಿ ಅವರನ್ನು ಮುಂದೆ ಹಾಯಗೊಡಲಿಲ್ಲ. ಇಬ್ಬರೂ ಪಕ್ಕದಲ್ಲಿದ್ದ ಮನೆಯ ಜಗಲಿಯನ್ನು ಹತ್ತಿ ನೋಟವನ್ನು ನೋಡುತ್ತ ನಿಂತರು. ಪಕ್ಕದಲ್ಲಿದ್ದವನು ಮೆರವಣಿಗೆಯ ಉದ್ದೇಶವನ್ನು ನಗುನಗುತ್ತಾ ವಿವರಿಸಲು ಅವರ ಕುತೂಹಲ ಇನ್ನೂ ಹೆಚ್ಚಿತು. ರಥ ಎದುರಿಗೆ ಬರಲು ಸ್ವಾಮಿಯನ್ನು ವಾಸು ಆಶ್ಚರ್ಯದಿಂದ ನೋಡಿ

" ಅಲ್ಲಿ ನೋಡೋ. ನಮ್ಮ ಗಣೇಶರಾಯರಲ್ಲವೇನೋ " ಎಂದ. ಸ್ವಾಮಿ

ದಿಟ್ಟಿಸಿ ನೋಡಿ ಆಶ್ಚರ್ಯದಿಂದ 'ಹೊ' ಗುಟ್ಟಿ ಸುಮ್ಮನೆ ನೋಡುತ್ತ ನಿಂತ. ಗಣೇಶರಾಯನೇ ಈ ಕಡೆ ತಿರುಗಲು ಸ್ವಾಮಿಯನ್ನು ಗುರುತಿಸಿ ನಕ್ಕು ಬೇರೆ ಕಡೆ ತಿರುಗಿದ–ರಥ ಮುಂದೆ ಸಾಗಿತು. ಸ್ವಾಮಿ ಮನಸ್ಸಿನಲ್ಲಿಯೇ ಗಣೇಶ ರಾಯನ ಬೇಟೆಯನ್ನು ಮೆಚ್ಚುತ್ತಾ, ತನಗಂತಹ ವಸ್ತು ಸಿಗಲಿಲ್ಲವಲ್ಲಾ ಎಂದು ಅಸೂಯೆಗೊಂಡು ಅಫೀಸನ್ನು ಸೇರಿದ.

ಮೆರವಣಿಗೆ ಮನೆಗೆ ಹಿಂದಿರುಗಬೇಕಾದರೆ ರಾತ್ರಿ ಹತ್ತು ಘಂಟೆಯಾಗಿ ಸ್ವಲ್ಪ ಹೊತ್ತಾಗಿತ್ತು. ವಧೂವರರಿಗೆ ಆರತಿಯಾದನಂತರ ಭಟ್ಟರು ಕೆಲವು ಶಾಸ್ತ್ರವಿಧಿಗಳನ್ನು ಪೂರಯಿಸಿ, ಅವರಿಗೆ ಉಪಾಹಾರವನ್ನು ಕೊಡಿಸಿ, ಶಯನ ಮಂದಿರಕ್ಕೆ ಕಳುಹಿಸಿಕೊಟ್ಟರು. ಸುಪ್ಪತ್ತಿಗೆಯ ಮೇಲೆ ವಧೂವರರನ್ನು ಕೂಡಿಸಿ ಮತ್ತೆ ಆರತಿ ಅಕ್ಷತೆ ಮಾಡಿ, ಬಂದಿದ್ದ ನಿತ್ಯಸುಮಂಗಲಿಯರು ಹಾಡಿ, ಹರಸಿ ಬಾಗಿಲು ಮುಚ್ಚಿಕೊಂಡು ಹೊರಕ್ಕೆ ಬಂದರು.

* * * *

ಗಣೇಶರಾಯನ ಮನಸ್ಸಿನಲ್ಲಿ ಹಣದಿಂದ ಜಗತ್ತಿನಲ್ಲಿ ಆಗದಿದ್ದುದು ಬೇರೆ ಯಾವದರಿಂದಲೂ ಆಗುವುದಿಲ್ಲವೆಂದು ದೃಢವಾಗಿ ನೆಟ್ಟುಹೋಗಿತ್ತು. ಅವನ ಜೀವನದಲ್ಲಿ ಹಾಗೆಯೇ ಸಾಗಿತ್ತು. ತಂದೆ ಬಿಟ್ಟುಹೋಗಿದ್ದ ನಾಲ್ಕು ಲಕ್ಷ ರೂ. ಆಸ್ತಿಯಲ್ಲಿ ಒಂದು ಲಕ್ಷವನ್ನು ವಿಲಾಸಪಟ್ಟು ರೋಗ ಸಂಪಾದಿಸು ವುದಕ್ಕೂ, ಇನ್ನೊಂದು ಲಕ್ಷವನ್ನು ಅದನ್ನು ಗುಣಪಡಿಸಿಕೊಳ್ಳುವುದಕ್ಕೂ ವ್ಯಯಮಾಡಿದ್ದ. ಮೊದಲಿನಿಂದಲೂ ಮುದ್ದಿನಲ್ಲಿ ಬೆಳೆದು ಅವನಿಗೆ ಕಷ್ಟದ ಪರಿವೆಯೇ ಇರಲಿಲ್ಲ. ಮನೆಯಲ್ಲಿಯೂ ಇವನನ್ನು ಹಿಡಿಯುವವರು ಯಾರೂ ಇರಲಿಲ್ಲ. ಸದಾ ರೋಗಿಷ್ಠೆಯಾದ ಹೆಂಡತಿ; ಪುರಾಣ ಪುಣ್ಯಕಥೆಗಳಲ್ಲಿ ತಲ್ಲೀನಳಾಗಿದ್ದ ತಾಯಿ—ಇವರಿಬ್ಬರಿಗೂ ಗಣೇಶರಾಯನ ವ್ಯವಹಾರ ಗೊತ್ತಾ ಗುತ್ತಲೇ ಇರಲಿಲ್ಲ. ಹಾದಿಬೀದಿಯ ಮಾತು ಅವರ ಕಿವಿಗೆ ಬಿದ್ದು ಅವನನ್ನು ಕೇಳಿದರೆ ಉಪಾಯಾಂತರದಿಂದ ಮಾರುತ್ತರ ಹೇಳಿ ಅವರನ್ನು ಸಮಾಧಾನ ಗೊಳಿಸಿಬಿಡುತ್ತಿದ್ದ.

ಗಣೇಶರಾಯ ಸುಂದರಿಯ ಸಹವಾಸದಿಂದ ತನಗೆಷ್ಟು ಸುಖ ದೊರೆ ಯುತ್ತದೆಂದು ಭಾವಿಸಿದ್ದನೋ ಅಷ್ಟು....ಅದರಲ್ಲಿ ಒಂದು ಭಾಗವಾದರೂ.... ದೊರೆಯದಿರಲು ತುಂಬಾ ವಿಷಾದಗೊಂಡ. ದುಡ್ಡಿನ ಕಡೆಗೆ ಲಕ್ಷ್ಯವಿಡದೆ

ಅವಳ ಸುಖಕ್ಕೆಂದು ಎರಡು ಮೂರು ತಿಂಗಳಲ್ಲಿಯೇ ೧೫-೨೦ ಸಾವಿರ ರೂಪಾಯಿಗಳವರೆಗೆ ವ್ಯಯಮಾಡಿದ್ದ. ಹುಣ್ಣಿಮೆಯ ಬೆಳಕಿನಲ್ಲಿ ತಾಜ ಮಹಾಲನ್ನು ತೋರಿಸಿದ—ಕಾಶ್ಮೀರದ ಉದ್ಯಾನವನಗಳ ರಮ್ಯತೆಯನ್ನು ಅವಳಿಗೆ ಕಾಣಿಸಿದ್ದ—ಕಾಶೀಕ್ಷೇತ್ರದ ಮಹಿಮೆಯನ್ನು ಅವಳ ಮನಗಾಣಿಸಿದ್ದ—ಕಲ್ಕತ್ತೆಯ ವೃತ್ತಾಪಹಾರಕ ನಾಟಕ ಶಾಲೆಗಳ ರೂಪಕಗಳನ್ನೂ ಆ ಮಹಾನಗರದ ವೈಭವವನ್ನೂ ಅವಳದನ್ನಾಗಿ ಮಾಡಿದ್ದ. ಆದರೂ ಸುಂದರಿಯ ಮನಸ್ಸು ಗಣೇಶರಾಯನ ಪ್ರೇಮಮುದ್ರೆಯನ್ನೊಪ್ಪಿಕೊಳ್ಳಲಿಲ್ಲ. ಕಾಳಿಘಾಟಿನಲ್ಲಿ ನಡೆಯುತ್ತಿದ್ದ ಅಸಹ್ಯ ವ್ಯಾಪಾರಗಳನ್ನವನು ವರ್ಣಿಸುತ್ತಿದ್ದರೆ ದೇವಿಯ ಮುಖದಲ್ಲಿ ಅವುಗಳ ಬಗ್ಗೆ ಕಾಣುತ್ತಿದ್ದ ಜಿಗುಪ್ಸೆಯ ರೌದ್ರ ಭಾವವನ್ನು ನೋಡಿ ಮುಖ ಮುಚ್ಚಿಕೊಂಡು ಬಂದಿದ್ದಳು. ಮಲ್ಲಿಕ್ ಅರಮನೆಯಲ್ಲಿದ್ದ ವೀನಸ್ ದೇವತೆಯ ನಗ್ನತೆಯನ್ನು ರಾಯ ಮೆಚ್ಚುತ್ತಿದ್ದರೆ ಸುಂದರಿ ಅದರ ಮುಖದಲ್ಲಿ ವಿರಾಜಿಸುತ್ತಿದ್ದ ದಿವ್ಯಶಾಂತಿ, ಅನುಪಮವಾದ ನಿಷ್ಕಾಪಟ್ಯವನ್ನು ಮೆಚ್ಚಿ ಬಂದಿದ್ದಳು. ರಾಯನ ವಿಷಯೋಪಭೋಗದ ಕರೆಗೆ ಅವನ ದಾಸಿಯಂತೆ ಸದಾಸಿದ್ಧಳಾಗಿರುತ್ತಿದ್ದರೂ, ಮನಸ್ಸಿನ ಉನ್ಮತ್ತ ದುಃಖವನ್ನು ಹುದುಗಿಸಿಡುತ್ತಿದ್ದಳು. ಅವನು ಸಲಿಗೆಯಿಂದ, ಪ್ರೇಮದಿಂದ ಆಡುತ್ತಿದ್ದ ಒಂದೊಂದು ಮಾತಿನ ಅರ್ಥವನ್ನೂ ಪೂರ್ತಿ ಗ್ರಹಿಸಿಕೊಳ್ಳಲು ಯತ್ನಿಸುತ್ತಾ ಇದ್ದಕ್ಕಿದ್ದಂತೆ ಮೈಮರೆಯುವಳು; ಮರುಕ್ಷಣವೇ ಅವುಗಳ ಅಸತ್ಯತೆಯ ಅರಿವುಂಟಾಗಿ ಚಿಂತೆಗೀಡಾಗುವಳು.

* * * *

ಮುಂಬಯಿಯ "ಭಾರತದ್ವಾರ"ದ ಮುಂದೊಂದು ದಿವಸ ನಿಂತಿದ್ದಾಳೆ. ಎದುರಿಗೆ ಆಳಅಂತ್ಯವನ್ನರಿಯದ ಮಹಾಸಾಗರ. ಭೋರ್ಗರೆಯುತ್ತಾ, ತನ್ನ ಅಸಹನೀಯವಾದ ಕ್ರೋಧವನ್ನು ವಿಶದಪಡಿಸುತ್ತಾ ಸಾಗರನು, ಮನುಷ್ಯನು ತನಗೆ ಏರ್ಪಡಿಸಿದ್ದ ಕಟ್ಟೆಗೆ ಬಂದು ಅಪ್ಪಳಿಸುತ್ತಿದ್ದಾನೆ. ರೋಷದಿಂದ ಅಪ್ಪಳಿಸುವುದು....ಮತ್ತೆ ಹಿಂದಿರುಗುವುದು....ಮತ್ತೆ ಅಪ್ಪಳಿಸುವುದು. ಹೀಗೆ ತಾನು ನಿಂತಿದ್ದ ಒಂದು ಘಂಟೆ ಸಾಗರನು ಕನಲಿ ಕನಲಿ ಭೋರ್ಗರೆಯುತ್ತಿದ್ದುದನ್ನು ನೋಡಿದಳು. ಅನಂತವಾದ ಸಾಗರದಂತೆ ಅನಂತವಾಗಿರುವ ತನ್ನ ಮನೋವೇದನೆಯೂ ಹಾಗೆಯೇ ಅಸಾಹಯಕವಾಗಿ

ಪ್ರಲಪಿಸುತ್ತಿರುವುದನ್ನು ಜ್ಞಾಪಿಸಿಕೋಂಡಳು. ಸಾಗರನ ಜೀವನ ದುಃಖ ದಿಂದ ಉಪ್ಪಾದಂತೆ ತನ್ನ ಜೀವನವು ಕಹಿಯಾದುದನ್ನೂ ನೆನಸಿಕೊಂಡಳು. ಆ ಹೊತ್ತಿಗೆ ಬಂದು ಹೆಗಲ ಮೇಲೆ ಕೈಹಾಕಿ ಮೋಟಾರಿಗೆ ಕರೆದೊಯ್ದ ರಾಯನೊಂದಿಗೆ ತನ್ನ ಚಿಂತೆಯನ್ನು ಸಂಗಡಲೇ ಕರೆದುಕೊಂಡು ಹೋದಳು.

ಸ್ವಲ್ಪ ಕಾಲಾನಂತರ ರಾಯನೂ ಇದನ್ನು ಗಮನಿಸಲಾರಂಭಿಸಿದ. ತಾನು ಬಲವಂತದಿಂದ ಸುಂದರಿಯನ್ನು ಒಲಿಸಿಕೊಂಡಿರುವುದಾಗಿದೆಯೇ ವಿನಾ ಅನುರಾಗದಿಂದಲ್ಲವೆಂಬುದನ್ನು ಮನಗಂಡ. ಸುಂದರಿ ಏನೂ ಬಯಸದಿದ್ದರೂ ಅವಳು 'ಇದನ್ನು ಮೆಚ್ಚಬಹುದು....ಅದನ್ನು ಕಂಡು ಸಂತೋಷಪಡ ಬಹುದು' ಎಂದು ಅಂಗಡಿಯಲ್ಲಿ ಕಂಡುಕಂಡುದನ್ನೆಲ್ಲ ತಂದು ಕೊಡುವನು. ಅವನಿತ್ತುದನ್ನು ಕೃತಜ್ಞತೆಯಿಂದ ಸ್ವೀಕರಿಸಿ ಒತ್ತಟ್ಟಿಗಿಡುವಳು. ತಾನು ಒಬ್ಬ ಭಾರಿ ಶ್ರೀಮಂತನ **ಬೆಲೆವೆಣ್ಣು** ಎಂಬುದನ್ನು ಮರೆಸಲು ಅವನೆಷ್ಟು ಪ್ರಯತ್ನಿಸಿದರೂ ಅವಳಿಂದ ಮಾತ್ರ ಆಗದು. ಅನೇಕ ಬಗೆಯ ಜನದ ಹತ್ತಿರ....ಅನೇಕ ಬಗೆಯ ಜೀವನವನ್ನು ಸಾಗಿಸಿದ್ದ ರಾಯನಿಗೆ ಇಲ್ಲಾದ ಪರಾ ಭವ ಮನಸ್ಸನ್ನು ತುಂಬಾ ಅಳುಕಲಾರಂಭಿಸಿತ್ತು. ತನ್ನ ಅನುಭವಕ್ಕೆ ತಕ್ಕ ಹುಡುಗಿ ಇವಳಲ್ಲ ಎಂಬ ನಿರ್ಧಾರದೊಡನೆ, ಲಕ್ಷ್ಮೀವಿಲಾಸ ನಾಟಕ ಮಂಡಳಿ ಯಲ್ಲಿ ಸ್ತ್ರೀ ಪಾತ್ರಗಳನ್ನಭಿನಯಿಸುತ್ತಿದ್ದ ಸೀತಾಬಾಯ್ ಎಂಬ ಹೆಂಗಸಿನ ಕಡೆಗೆ ಮನಸ್ಸು ಜಾರಿತ್ತು. ಈ ವಿಚಾರದ ಇತ್ಯರ್ಥ ಆಗಿಯೇಬಿಡಲೆಂದು ಒಂದು ದಿನ ರಾಯ ಮುದ್ದಿನಿಂದ ಸುಂದರಿಯನ್ನು ನೇವರಿಸುತ್ತಾ

"ನನ್ನ ಕಂಡರೆ ಹೀಗೇತಕ್ಕೆ ಇದ್ದೀಯಾ ಸುಂದರಾ,"

"ಹೇಗಿದ್ದೀನಿ?"

"ಏನೋ ಕಾಟಾಚಾರಕ್ಕೆ ಸಂಸಾರ ಮಾಡಿಕೊಂಡಿದ್ದ ಹಾಗೆ. ನಿನಗೆ ಏತಕ್ಕೆ ಕಡಿಮೆಮಾಡಿದ್ದೇನೆ. ಏನು ಕೇಳಿದರೂ ನಿನ್ನದೇ ಆಗಿದೆಯಲ್ಲಾ."

"ಇಲ್ಲವೆಂದವರು ಯಾರು?"

"ಯಾರು ಇಲ್ಲ ಸರಿಯೆ. ಆದರೆ ಹಾಗೆ ಸುಮ್ಮನೆ ಬಾಯಲ್ಲಿ ಹೇಳಿ ಏನು ಪ್ರಯೋಜನ....ಕಾರ್ಯದಲ್ಲಿ ತೋರಿಸಿದರಲ್ಲವೇ? ನಿಜವಾಗಿ ಹೇಳು, ನನ್ನ ಕಂಡರೆ ನಿನಗೆ ಪ್ರೀತಿ ಇದೆಯೇ?"

"ಪ್ರೀತಿ ಅಂದರೇನು ರಾಯರೇ?"

“ಪ್ರೀತಿ ಅಂದರೆ ವಿಶ್ವಾಸ....ಅನುರಾಗ....ಪ್ರೇಮ.”

“ಅವೂ ಪ್ರೀತಿ ಅನ್ನುವ ಹಾಗೆ ಮಾತುಗಳೇ ಆದುವಲ್ಲಾ. ವಿಶ್ವಾಸ ಅನುರಾಗ, ಪ್ರೇಮ ಅಂದರೇನು ?”

“ಅಂದರೆ....ಮನಸ್ಸನ್ನು ಧಾರೆಯೆರೆದುಕೊಡುವುದು.”

“ನನ್ನ ಮನಸ್ಸನ್ನು ದೊಡ್ಡವರು ನಿಮಗೆ ಧಾರೆಯೆರೆದು ಕೊಟ್ಟೇ ಇದ್ದಾರಲ್ಲಾ.”

“ಅವರು ಕೊಟ್ಟರೆ ನೀನು ಕೊಟ್ಟ ಹಾಗಾಯಿತೇ ?”

“ಇಲ್ಲಾ ಸರಿಯೇ. ಆದರೆ ಮನಸ್ಸು ತಾನಾಗಿ ಹೋಗಬೇಕೆಂದು ಬಯಸಬೇಕಲ್ಲದೆ ಅದನ್ನು ಕೊಡಲು ನಾನು ಯಾರು.”

“ಏನು. ದೊಡ್ಡ ವೇದಾಂತಿಯಾಗಿ ಬಿಟ್ಟೆ. ನಿನ್ನ ಮನಸ್ಸು ನಿನ್ನದಲ್ಲದೆ ನನ್ನದೇನು ?”

“ಹೌದು ಅದು ನಿಮ್ಮದು.....ನನ್ನದಲ್ಲ. ರಾಶಿರಾಶಿ ರೂಪಾಯಿಗಳನ್ನು ಸುರಿದು ನೀವು ಅದನ್ನು ನಿಮ್ಮದು ಮಾಡಿಕೊಂಡಿದ್ದೀರಿ.”

ಸುಂದರಿಯಲ್ಲಿ ಕಂಡು ಬಂದ ವ್ಯತ್ಯಾಸಕ್ಕೆ ರಾಯ ಬೆರಗಾದ. ಮೊದಲಿನ ಮುಗ್ಧಸ್ಥಿತಿಗೆ ಈಗ ಯಾವ ಧಕ್ಕೆ ತಗಲಿತೆಂದು ಯೋಚಿಸಹತ್ತಿದ. ಅವಳ ಮನಸ್ಸನ್ನು ಒಲಿಸಿಕೊಳ್ಳದೆ ದೇಹದ ಮೇಲೆ ತಾನು ನಡೆಸುತ್ತಿದ್ದ ಅತ್ಯಾಚಾರಕ್ಕೆ ಜಿಗುಪ್ಸಿತನೂ ಆದನು. ಯೋಚಿಸುತ್ತಾ ಸುಂದರನ ಕೈಹಿಡಿದು

“ನಿನ್ನ ಮನಸ್ಸು ನಿಜವಾಗಿಯೂ ನನ್ನದಾಗದೇ ಸುಂದರಾ.”

“ಹೇಗೆ ಸಾಧ್ಯ ಧಣಿಗಳೇ, ನಾನು ಸೂಳೆ, ತಾವು ಭಾಗ್ಯವಂತರು. ನನ್ನನ್ನು ಕೊಳ್ಳಲು ತಾವು ಸಮರ್ಥರು....ಇನ್ನೇತಕ್ಕೆ ಮನಸ್ಸಿನ ಮಾತು.”

“ಹೌದು ಹೌದು. ನೀನು ಹೇಳುವುದು ನಿಜ. ಹಣ ಕೊಳ್ಳದ ವಸ್ತುವೂ ಲೋಕದಲ್ಲಿದೆಯೆಂದು ನಾನು ತಿಳಿಯದೆ ಹೋದೆ ನಿನ್ನನ್ನು ನಾನು ಆಶಿಸಿದ್ದೇ ತಪ್ಪು.”

“ಯಾಕೆ....ನಾನೇನು ತಪ್ಪು ಮಾಡಿದೆ.”

“ನಿನ್ನದೇನೂ ತಪ್ಪಿಲ್ಲ. ಇಷ್ಟು ಬಾಳು ಬಾಳಿ ಜೀವನದ ಯಾವ ಕಹಿಸಿಹಿಯನ್ನೂ ಕಾಣದ ನಿನ್ನಂತಹ ಮಗುವನ್ನು ನಾನು ವಿಲಾಸಕ್ಕೆ ಉಪಯೋಗಿಸಿಕೊಳ್ಳುವುದೆಂದರೆ....”

ರಾಯನ ಖಿನ್ನತೆ ಸುಂದರಿಗೂ ನೋವನ್ನಿತ್ತಿತು. ಅವನ ಹತ್ತಿರ ಕುಳಿತು ಮೃದುವಾಗಿ ಕೆನ್ನೆಯ ಮೇಲೆ ಕೈಯಾಡಿಸುತ್ತಾ

"ನಾನು ಮಗುವಲ್ಲ ದೇವರೇ........ಯುವತಿಯೂ ಅಲ್ಲ....ಮುದುಕಿಯಾಗಿದ್ದೇನೆ. ಇಷ್ಟು ಚಂದ ಕಾಣುವ ಈ ದೇಹದೊಳಗೆ ಯಾವ ಆಸೆಯೂ ಇಲ್ಲ, ಯಾವ ಹಂಬಲವೂ ಇಲ್ಲ. ಯಾವ... ...."

ಮುಂದೆ ಹೇಳಲಾಗದೆ ಸುಮ್ಮನಾದಳು. ಕಣ್ಣಿನಿಂದ ನೀರು ಹರಿದು ಮನಸ್ಸು ತುಸು ಹಗುರವಾಯಿತು.

"ನನ್ನ ಪ್ರಾಣವೆಲ್ಲಾ ಸಂಗೀತದಲ್ಲಿ ಸೇರಿ ಹೋಗಿದೆ ಹಾಡುತ್ತ ಕುಳಿತರೆ ನನಗೆ ಆನಂದ; ಹಾಡದೆ ಸುಮ್ಮನಿದ್ದರೆ ದುಃಖ ಇದನ್ನು ಬಿಟ್ಟು ಬೇರೆ ಸುಖದುಃಖಗಳಿವೆ ಎಂಬುದನ್ನು ನಾನು ಕಾಣೆ."

ಎಂದು ಹೇಳಿ ಸುಮ್ಮನಾದಳು. ರಾಯನು ಎರಡು ಕೈಗಳನ್ನೂ ಮುಂದಕ್ಕೆ ಚಾಚಿ,

"ಅದು ಹೇಗಾದರೂ ಇರಲಿ. ಇದೊಂದು ದಿವಸ ನೀನು ನನ್ನವಳಾಗು. ಮೂರು ತಿಂಗಳು ನನ್ನ ರಾಕ್ಷಸೀವೃತ್ತಿಯನ್ನನುಭವಿಸಿದ ನೀನು ಈ ಒಂದು ರಾತ್ರಿ ಅವನ್ನು ಶುದ್ಧಾಂತಃಕರಣದಿಂದ 'ಪ್ರೇಮ' ವೆಂದು ಒಪ್ಪಿಕೊಳ್ಳು....ನನಗಷ್ಟೇ ಸಾಕು. ನಾಳಿನಿಂದ ನಾನೂ ನೀನೂ ಬೇರೆ ಬೇರೆ"

ಎಂದು ಅಪ್ಪಿ ಅವಳನ್ನು ತನ್ನ ತೋಳಸೆರೆಯಲ್ಲಿ ಬಂದಿಯನ್ನಾಗಿಸಿದ. ಅವನ ಅನುಭವದಲ್ಲಿ ಅದು ಮೂರು ತಿಂಗಳಿಗಿಂತ ಬೇರೆಯಾದ ಒಂದು ಅತಿಶಯವಾದ ದಿನ; ಅವಳ ಅನುಭವದಲ್ಲಿ ಅದು ಮೂರು ತಿಂಗಳಿನಂತಹ ಇನ್ನೊಂದು ದಿನ.

* * * *

ಅನಂತರಾಯರ ಆರ್ಥಿಕಸ್ಥಿತಿಯ ವಿಚಾರ ಎಲ್ಲರಿಗಿಂತಲೂ ಭಟ್ಟರಿಗೆ ಹೆಚ್ಚು ಗೊತ್ತಿದ್ದರೂ ಅವರು ರಾಯರನ್ನು ಸುಂದರನಿಗೆ ಒಪ್ಪಲು ಒಂದು ಪ್ರಬಲವಾದ ಕಾರಣವಿತ್ತು. ಆನಂದಗಿರಿಪೀಠದ ಧರ್ಮಾಧಿಕಾರಿಯಾದ ಭಟ್ಟರಿಗೆ ಪೀಠದ ಕೆಲಸ ಹೆಚ್ಚಿಗೆ ಇಲ್ಲದಿದ್ದರೂ ವರಮಾನ ತಕ್ಕಮಟ್ಟಿಗೆ ಗಣ್ಯವಾಗಿಯೇ ಇತ್ತು. ಮಠಗಳಲ್ಲಿ ನಡೆಯುತ್ತಿರುವ ಅನಾಚಾರ, ಮಠಾಧಿಕಾರಿಗಳ ದುರಾಚಾರದ ಬಗ್ಗೆ ಅನಂತರಾಯರ "ವೀರ ಕರ್ಣಾಟಕ" ಪತ್ರಿಕೆ

ದೊಡ್ಡ ಧಾಳಿಯನ್ನೇ ಆರಂಭಿಸಿಬಿಟ್ಟಿತ್ತು. ಒಂದಲ್ಲೊಂದು ದಿನ ಈ ಗದಾ ಪ್ರಹಾರ ತಮ್ಮ ಬುರುಡೆಯನ್ನು ಹಾರಿಸುವುದೆಂದು ಭಟ್ಟರು ಮೊದಲೇ ಲೆಕ್ಕಹಾಕಿಕೊಂಡು ಅದಕ್ಕೆ ಉಪಾಯವಾಗಿ ಅನಂತರಾಯರನ್ನು ವಶಪಡಿಸಿ ಕೊಳ್ಳುವುದೇ ಚಿಕಿತ್ಸೆಯೆಂದು ನಿರ್ಧರಿಸಿಕೊಂಡರು. ಅನಂತರಾಯರ ಸಶಕ್ತ ಶೈಲಿಯಲ್ಲಿದ್ದ ಮಿಂಚು ಸಿಡಿಲುಗಳಿಗೆ ಕನ್ನಡ ಪ್ರಪಂಚವೇ ಗಡಗಡ ನಡುಗು ತ್ತಿದ್ದರೂ ಮನುಷ್ಯನನ್ನು ಯೋಗ್ಯರ ಪಟ್ಟಿಗೆ ಸೇರಿಸಿರಲಿಲ್ಲ. ಅವರು ಸಾರ್ವ ಜನಿಕ ಸಂಸ್ಥೆಗಳ ಸೂತ್ರಗಳನ್ನು ಹಿಡಿದುಕೊಂಡು ನಡೆಸುತ್ತಿದ್ದ ವ್ಯವಹಾರ ಲೋಕಕ್ಕೇ ಗೊತ್ತಿತ್ತು. ಆದರೂ ಅಲ್ಲಿ ಇಲ್ಲಿ ನಾಲ್ಕು ಜನ ದೊಡ್ಡವರ ಜತೆ ಯಲ್ಲಿ ಅವರು ಓಡಾಡುತ್ತಿದ್ದುದರಿಂದ ಲೋಕ ಅವರನ್ನು ಗೌರವಿಸಿದಂತೆ ನಟಿಸಿ ತನ್ನ ಮಾನ ಪ್ರಾಣಗಳನ್ನೂ ಉಳಿಸಿಕೊಳ್ಳುತ್ತಿತ್ತು.

ಸುಂದರನ ವಿವಾಹದ ಮೆರವಣಿಗೆಯನ್ನು ನೋಡಿದ್ದವರ ಪೈಕಿ ಅನಂತ ರಾಯರೂ ಒಬ್ಬರಾಗಿದ್ದರು. ಈ ಹುಡುಗಿ ಮೊದಲೇ ತಮ್ಮ ಕಣ್ಣಿಗೆ ಬೀಳ ಲಿಲ್ಲವೆಂದು ಬಹಳನೊಂದುಕೊಂಡು ಚಂಪ್ರಮ್ಮನ ಸ್ನೇಹವನ್ನು ಸಂಪಾದಿಸಿ ಕೊಳ್ಳಲು ವಿಶ್ವಸಾಹಸವಾಡುತ್ತಿದ್ದರು. "ವೀರ ಕರ್ಣಾಟಕ" ದಲ್ಲಿ ಆರಂಭ ವಾದ ಮಠಗಳ ಮೇಲಣ ಲೇಖನಗಳು ರಾಯರ ಆಸೆಯನ್ನು ಪೂರ್ಣಗೈಯು ವಂತೆ ಭಟ್ಟರನ್ನು ಒಂದು ದಿವಸ ಅವರ ಕಾರ್ಯಾಲಯಕ್ಕೆ ಕರೆತಂದಿತು. ಪರಿಚಯ ಕ್ರಮೇಣ ಸ್ನೇಹಕ್ಕೆ ಬೆಳೆದು, ಕೆಲವು ದಿವಸಗಳೊಳಗಾಗಿ "ವೀರ ಕರ್ಣಾಟಕ" ದ ತುಂಬಾ ಆನಂದಗಿರಿಪೀಠದ ಆಡಳಿತದ ವಿಚಕ್ಷಣೆಯ ಬಗ್ಗೆ ಪ್ರಶಂಸನಾತ್ಮಕವಾದ ಲೇಖನಗಳೂ, ಭಟ್ಟರ ವ್ಯವಹಾರ ಹಾಗೂ ವೈದಿಕ ಜ್ಞಾನದ ಪ್ರಶಂಸೆ ಬರಲಾರಂಭವಾಯಿತು. ಭಟ್ಟರೂ ಹೇಗಾದರೂ ರಾಯರ ಉಪಕಾರಕ್ಕೆ ತಕ್ಕ ಪ್ರತ್ಯುಪಕಾರವನ್ನು ಮಾಡಬೇಕೆಂದು ಮನಸ್ಸು ಮಾಡಿ ಕೊಂಡರು.

ಗಣೇಶರಾಯ ಸುಂದರನಲ್ಲಿಗೆ ಬರುವುದನ್ನು ಕೂಡಲೆ ನಿಲ್ಲಿಸದಿದ್ದರೂ ನಿಲ್ಲಿಸುವುದಕ್ಕೆ ಪೀಠಿಕೆಯನ್ನೇನೋ ಹಾಕಿದ. ತಾನು ಲಕ್ಷ್ಮೀವಿಲಾಸ ನಾಟಕ ಮಂಡಳಿಯ ಸೀತಾಬಾಯಿಯೊಂದಿಗೆ ಸ್ನೇಹಬೆಳೆಸಿರುವ ಸಂಗತಿಯನ್ನು ಹೆಮ್ಮೆಯಿಂದ ಒಂದು ದಿವಸ ಸುಂದರನೊಂದಿಗೆ ಹೇಳಿಕೊಂಡದ್ದಲ್ಲದೆ, ಸೀತಾ ಬಾಯಿ ಅಭಿನಯ ನೋಡಲಿಕ್ಕೆ 'ಗುಲೇಬಕಾವಲಿ' ನಾಟಕಕ್ಕೆ ಒಂದು ದಿವಸ

ಸುಂದರನನ್ನು ಕರೆದುಕೊಂಡು ಹೋಗಿಯೂ ಇದ್ದನು. ಸುಂದರನಿಗೆ ಈ ಸಂಬಂಧ ಸವ್ಯದಲ್ಲಿಯೇ ತಪ್ಪಿಹೋಗುವುದೆಂದು ತಿಳಿದ ಮೇಲಂತೂ ತುಂಬಾ ಸಂತೋಷವೇ ಆಯಿತು. ಇನ್ನಾದರೂ ನಿರಾತಂಕವಾಗಿ ಕುಳಿತು ನಾಲ್ಕು ಘಂಟೆ ಸಂಗೀತಾಭ್ಯಾಸವನ್ನಾದರೂ ನಿರ್ಬಾಧಿತಳಾಗಿ ಮಾಡಿಕೊಳ್ಳಬಹುದೆಂದು ಭಾವಿಸಿಕೊಂಡಳು. ಆದರೆ ಸಮಾಜ ಗಣೇಶರಾಯನ ಸ್ಥಾನಕ್ಕೆ ಅನಂತರಾಯನನ್ನು ಸಿದ್ಧವಾಗಿಟ್ಟಿತ್ತು.

ಕೇವಲ ರಾಜಕೀಯ, ಸಾಮಾಜಿಕ ವಿಷಯಗಳಿಗೇ ಮೀಸಲಾಗಿದ್ದ 'ವೀರ ಕರ್ಣಾಟಕ'ದಲ್ಲಿ ಇನ್ನು ಮುಂದೆ ಲಲಿತಕಲೆಗಾಗಿ ಒಂದು ಪುಟ ಮೀಸಲಾಗಿಡಲಾಗುವುದೆಂಬ ಪ್ರಕಟನೆಯನ್ನು ಓದಿ ಚಂದಾದಾರರು ವಿಸ್ಮಯಗೊಂಡರು. ಪ್ರಕಟನೆಯಂತೆ ಮುಂದಿನ ವಾರವೇ ನಗರದಲ್ಲಿ ತಮ್ಮ ನಾಟಕಗಳನ್ನಾಡುತ್ತಿದ್ದ 'ಲಕ್ಷ್ಮೀವಿಲಾಸ ನಾಟಕ ಮಂಡಳಿ'ಯ ಇತಿಹಾಸ, ಕಲಾಪ್ರತಿಭೆ, ಪ್ರಧಾನ ನಟನಟಿಯರ ಪರಿಚಯಗಳನ್ನೊಳಗೊಂಡ ಸಚಿತ್ರ ಲೇಖನ ಪ್ರಕಟವಾಯಿತು. ಆದೇ ಕಂಪನಿಯ ಪ್ರಧಾನ ನಟಿಯಾದ ಸೀತಾಬಾಯಿಯ ಸುಂದರ ಚಿತ್ರವೊಂದನ್ನು ಉತ್ತಮ ಕಾಗದದ ಮೇಲೆ ಅಚ್ಚು ಹಾಕಿಸಿ ಔದಾರ್ಯದಿಂದ ಸಂಪಾದಕರು ಅದನ್ನು ಉಚಿತ ಪುರವಣಿಯಾಗಿ ಹಂಚಿಯೂ ಇದ್ದರು. ಮಾರನೆಯ ವಾರ 'ರಾವಬಹದ್ದೂರ್' ಗಿರಿ ದೊರೆತದ್ದಕ್ಕಾಗಿ ಶ್ರೀಮಂತ ಗಣೇಶರಾಯರ ಕಲಾಮಯವಾದ ನಿಸ್ವಾರ್ಥ ಜೀವನ ಲಿಖಿತವಾಗಿ ಸಚಿತ್ರವಾಗಿ ಪ್ರಕಟವಾಯಿತು. ಮಾರನೆಯ ವಾರ ಸಂಗೀತ ಸರಸ್ವತಿ ಸುಂದರಮ್ಮನ ಚಿತ್ರವೂ ಆಕೆಗೆ ವಿದ್ಯಾದಾನಮಾಡಿದ ವಿದುಷಿ ಚಂದ್ರಮ್ಮನ ಚಿತ್ರವೂ ಪ್ರಕಟವಾಯಿತು.

ಗಾಯನ ಸಮಾಜಗಳ ಆಹ್ವಾನಗಳನ್ನು ಸ್ವೀಕರಿಸುತ್ತಾ ಸುಂದರಮ್ಮನಿಗೆ ಊಟ ಉಪಚಾರಗಳಿಗೂ ವಿರಾಮವಿಲ್ಲದಂತಾಗುತ್ತ ಬಂದಿತು. ಈ ಹೊತ್ತು ತಂಜಾವೂರಿನಲ್ಲಿ ಕಛೇರಿ; ನಾಳೆ ಕೊಯಮತ್ತೂರಿನಲ್ಲಿ ಕಛೇರಿ; ನಾಳಿದ್ದು ಮದರಾಸಿನಲ್ಲಿ ಕಛೇರಿ. ಹೀಗಾಗಿ ಒಂದೆರಡು ವರ್ಷಗಳಲ್ಲಿ ಸುಂದರಮ್ಮನ ವಿದ್ವತ್ತಿನ ಖ್ಯಾತಿಯು ದಕ್ಷಿಣ ಭಾರತದಲ್ಲೆಲ್ಲಾ ಗುಡುಗಾಡುವಂತಾಯಿತು. ಯಾವ ಸಭೆಯೂ, ಯಾವ ಸಮ್ಮೇಳನವೂ, ಯಾವ ಕೂಟವೂ ಸುಂದರಮ್ಮನ ಗಾಯನವಿಲ್ಲದೆ ಕೂಡದಂತಾಯಿತು. ಲೋಕವೆಲ್ಲಾ ಒಂದ

ಲ್ಲೊಂದು ರೀತಿಯಲ್ಲಿ ಸುಂದರಮ್ಮನನ್ನು ಸ್ತುತಿಸಲಾರಂಭಿಸಿತು. ಎಲ್ಲರ ಹೃದಯದಲ್ಲಿಯೂ ಆನಂದದ ತರಂಗಗಳನ್ನೇಳಿಸುತ್ತಿದ್ದ ಕಲಾವತಿ ಮಾತ್ರ ಆನಂದವಿಹೀನಳಾಗಿ ಕೊರಗಿ ಕೊರಗಿ ಸೊರಗುತ್ತಿದ್ದಳು.

ಅನಂತರಾಯರ ಹೆಮ್ಮೆಗೆ ಮೇರೆಯೇ ಇಲ್ಲ. ಆಕೃತಿಯಿಲ್ಲದೆ ಬಿದ್ದಿದ್ದ ಅಮೃತಶಿಲೆಯನ್ನು ಕಡೆದು ಅದಕ್ಕೆ ಸುಂದರ ರೂಪೊಂದನ್ನಿತ್ತು ಶಿಲಾಶಿಲ್ಪವಾಗಿ ಮಾರ್ಪಡಿಸುವ ಕಲಾವಿದನಿಗೂ ಅಷ್ಟು ಹೆಮ್ಮೆಯಿರಲಾರದು. ತಾವು ಮಾಡಿದ್ದ ಮಹೋಪಕಾರಕ್ಕೆ ಸುಂದರಿ ಯಾವಜ್ಜೀವವೂ ತನಗೆ ಕೃತಜ್ಞಳಾಗಿರಬೇಕೆಂದು ಅವರ ಎಣಿಕೆ. ಸುಂದರಿ ಹೃದಯದ ತುಂಬಾ ಅನಂತರಾಯರ ಬಗ್ಗೆ ಕೃತಜ್ಞತೆಯನ್ನು ತುಂಬಿಕೊಳ್ಳಲು ಸಮರ್ಥಳಾದಳೇ ವಿನಾ ಪ್ರೇಮವನ್ನು ತುಂಬಿಕೊಳ್ಳಲು ಸಮರ್ಥಳಾಗಲಿಲ್ಲ. ಎಷ್ಟೋಬಾರಿ ಅದಕ್ಕಾಗಿ ಯತ್ನಿಸುವಳು....ಆದರೆ ಗಣೇಶರಾಯನ ನೆನಹು ಬಂದು ಅದನ್ನು ಅಳಿಸಿಬಿಡುವುದು. ಒಬ್ಬನು ಯಥೇಚ್ಛವಾಗಿ ದ್ರವ್ಯಕೊಟ್ಟ; ಇನ್ನೊಬ್ಬ ಸಾಕು ಸಾಕೆನ್ನುವಷ್ಟು ಖ್ಯಾತಿಕೊಟ್ಟ. ತನ್ನಲ್ಲಿದ್ದ ಅಪಾರವಾದ ದ್ರವ್ಯಖ್ಯಾತಿಗಳಿಂದ ನಿಷ್ಕಲ್ಮಷವಾದ ಪ್ರೇಮವನ್ನು ಕೊಳ್ಳಲಾಗದಿದ್ದಳು. ಒಮ್ಮೆ ಒಂದೇ ಒಂದು ಬಾರಿ....ಯಾರಾದರೂ....ಕಾಮದ ಕಲ್ಮಷಕೂಪಕ್ಕೆ ಬೀಳದೆ....ನನ್ನ ಬಳಿ ಕುಳಿತು....'ಸುಂದರಾ....ನನ್ನ ಮುದ್ದುಗಿಣಿಯೇ' ಎನ್ನಬಾರದೇ ಎಂದುಕೊಂಡು ಕಂಬನಿಗರೆಯುವಳು. ಮನಸ್ಸಿನಲ್ಲಿ ನಡೆಯುವ ವ್ಯಾಪಾರವನ್ನು ಚಿತ್ರಿಸುವ ಯಂತ್ರವನ್ನು ಯಾರಾದರೂ ನಿರ್ಮಿಸಬಾರದೇ ? ಎಂದು ಹಾತೊರೆಯುವಳು. ತನ್ನ ಜೀವನ, ತನ್ನ ಅಸ್ವತಂತ್ರ ಬಾಳುವೆ ಎಲ್ಲಿಗೆ ತನ್ನನ್ನು ಕರೆದೊಯ್ಯುವುದು ಎಂದು ಯೋಚಿಸುವಳು. ಆದರೆ ಯೋಚನೆ ಬಗೆಹರಿಯದೆ ಬಂದಲ್ಲಿಯೇ ಅಡಗಿ ಹೋಗುವುದು.

ಚಂದ್ರಮ್ಮನ ಮನೆಯಲ್ಲಿ ಯಾರಿಗೂ ಅನಂತರಾಯನನ್ನು ಕಂಡರೆ ಅಷ್ಟು ವಿಶ್ವಾಸವಿಲ್ಲ. ಲೋಭಿಯೆಂದು ಪುಟ್ಟುವಿಗೆ ತಿರಸ್ಕಾರ, ಶೋಚನೆಂದು ಚಂದ್ರಮ್ಮನಿಗೆ ಅಲಕ್ಷ್ಯ, ನಿರ್ಗತಿಕನೆಂದು ವೆಂಕಟಮುನಿಯಯ್ಯನಿಗೆ ಜಿಗುಪ್ಸೆ. ಆದರೆಲ್ಲರೂ ಭಟ್ಟರ ಮೇಲಿನ ಗೌರವದಿಂದ ಸುಮ್ಮನಾಗಿದ್ದರು. ಅನಂತರಾಯರ ಅಧಿಕಪ್ರಸಂಗ ಭಟ್ಟರನ್ನೂ ಕೋಚ ಅಸಮಾಧಾನಪಡಿಸುತ್ತಿತ್ತು.

"ಈ ಶನಿಯ ಕಾಟ ಹೇಗಾದರೂ ತಪ್ಪಿದರೆ ಸಾಕು" ಎಂದು ಅವರೂ

ಒಂದೆರಡು ಬಾರಿ ಹೇಳಿಯೂ ಇದ್ದರು. ಒಮ್ಮೆ ತಮ್ಮ ಬಲೆಗೆ ಬಿದ್ದ ಅನಂತ ರಾಯರು ತಮಗೆ ವಿರೋಧವಾದ ಯಾವ ವ್ಯವಹಾರಕ್ಕೂ ಕೈಹಾಕುವುದಿಲ್ಲ ವೆಂಬುದನ್ನು ಭಟ್ಟರು ನಿರ್ಧರಿಸಿಕೊಂಡುಬಿಟ್ಟಿದ್ದರು.

ಸುಂದರಿಯ ಗಾಯನವನ್ನು ಮದರಾಸಿನ ಒಂದು ಗಾಯನ ಸಮಾಜ ದಲ್ಲಿ ಕೇಳಿದ್ದ ಅಲ್ಲಿನ ಭಾರಿ ಜಮೀನ್‌ದಾರರೂ, ಶ್ರೀಮಂತರೂ ಆದ ಕೃಷ್ಣಾ ಪುರದ ರಾಜರು ಸುಂದರಿಯ ವಿಳಾಸವನ್ನು ದೊರಕಿಸಿಕೊಂಡು, ಮಾತುಕತೆ ಯಾಡಿಕೊಂಡು ಬರಲು ತಮ್ಮ ಆಪ್ತ ಸಚಿವನನ್ನು ಈ ಸಮಯಕ್ಕೆ ಸರಿ ಯಾಗಿ ಕಳುಹಿಸಿದ್ದರು. ಸುಂದರಿ ತಮ್ಮೊಂದಿಗೆ ವೈಭವದಿಂದ ಮದರಾಸಿನಲ್ಲಿರ ಬೇಕೆಂದೂ ಅದಕ್ಕೆ ಪ್ರತಿಯಾಗಿ ತಾವು ಮನೆಗೆ ತಿಂಗಳಿಗೆ ಒಂದು ಸಾವಿರ ದಂತೆ ಕಳುಹಿಸುವುದಾಗಿಯೂ ಹೇಳಿ ಕಳುಹಿಸಿದ್ದರು. ಸುಂದರಿಯನ್ನು ಊರುಬಿಟ್ಟು ಹೊರಗೆ ಕಳುಹಿಸುವುದಕ್ಕೆ ಚಂದ್ರಮ್ಮನಿಗೆ ಇಷ್ಟವಿಲ್ಲದಿದ್ದರೂ ಭಟ್ಟರ ಆಗ್ರಹಕ್ಕೆ ಒಪ್ಪಲೇಬೇಕಾಯಿತು.

ಪ್ರಯಾಣ ನಿಶ್ಚಯವಾಗಿ ಹೋಯಿತು. ಜತೆಯಲ್ಲಿ ಪುಟ್ಟು ಹೋಗು ವುದೆಂದೂ, ರಾಮಕ್ಕ ವೃದ್ಧಾಪ್ಯದ ದೆಸೆಯಿಂದ ಚಂದ್ರಮ್ಮನಲ್ಲಿಯೇ ಉಳಿದು ಕೊಳ್ಳುವುದೆಂದು ಗೊತ್ತಾಯಿತು. ಮೋಟಾರಿಗೆ ಸಾಮಾನುಗಳು ಹೋದವು. ಸುಂದರಿ ಹೋಗುವ ಮುನ್ನ ರಾಮಕ್ಕನಿದ್ದಲ್ಲಿಗೆ ಬಂದು ಆಕೆಯ ಎರಡು ಕಾಲು ಗಳನ್ನೂ ಹಿಡಿದು ನಮಸ್ಕರಿಸಿದಳು. ರಾಮಕ್ಕ ಧಾರೆ ಧಾರೆಯಾಗಿ ಸುರಿಯು ತ್ತಿದ್ದ ಕಣ್ಣೀರನ್ನು ನಿವಾರಿಸಿಕೊಳ್ಳುತ್ತಾ ಸುಂದರಿಯನ್ನು ಅಪ್ಪಿ ಅಸ್ಪಷ್ಟವಾಗಿ

"ಹೋಗಿ ಬಾ ಕಂದಾ. ದೇವರ ಇಚ್ಛೆ ಹೇಗೆ....ಹೇಗಿದೆಯೋ...."

ಎಂದು ಮಾತ್ರ ಹೇಳಿ ಸುಮ್ಮನಾದಳು. ಚಂದ್ರಮ್ಮನೂ ಸುಂದರಿಯನ್ನು ಅಪ್ಪಿ ಕಣ್ಣೀರ್ಗರೆದಳು....ಭಟ್ಟರು ಸಮಾಧಾನ ಹೇಳಿ ಸುಂದರಿಯನ್ನು ಗಾಡಿ ಹತ್ತಿಸಿ ಕಳುಹಿಸಿ ಬಂದರು.

೯

ಕಛೇರಿಯೇನೋ ಸಾಗಿತ್ತು. ಸುಂದರಿಯ ಗಾಯನವಲ್ಲದೆ ಮಧ್ಯೆ ಮಧ್ಯೆ ಅತಿಥಿಗಳೂ ಆರಂಭಿಸಿಬಿಡುತ್ತಿದ್ದರು. ಸುಂದರಿಯ ಎದುರಿಗೆ ಸರಿ ಯಾಗಿ ರಾಜರು, ಅವರ ಅಕ್ಕಪಕ್ಕದಲ್ಲಿ ಗೆಳೆಯರು ಒರಗುದಿಂಬುಗಳನ್ನಾಶ್ರ ಯಿಸಿಕೊಂಡು ಕುಳಿತಿದ್ದರು. ಒಂದು ಕೀರ್ತನೆ ಮುಗಿಯುವುದರೊಳಗಾಗಿ

ಅತಿಥಿಗಳಿಗೆ ನಾಲ್ಕಾರು ಸಲವಾದರೂ ಮದ್ಯಮಾತೆಯ ಸೇವೆಯಾಗುತ್ತಿತ್ತು. ಹಾಡಲು ಹುರುಪಿಲ್ಲದಿದ್ದರೂ ಸುಂದರಿ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಿದ್ದಳು. ಪುಟ್ಟ ತೂಕಡಿಸುತ್ತಾ ತಂಬೂರಿ ಕೈಜಾರಿ ಬೀಳದಂತೆ ಎಚ್ಚರವಾಗಿರಲು ವಿಶ್ವಸಾಹಸಮಾಡುತ್ತಿದ್ದ. ರಾಜರು ಮಧ್ಯೆಮಧ್ಯೆ ಅಮಲಿನ ಪ್ರಭಾವಕ್ಕೆ ಸಿಕ್ಕಿ ಆಜ್ಞೆ ಮಾಡುತ್ತಿದ್ದರು. ಒಂದು ರಾಗವನ್ನು ಆರಂಭಿಸುವುದಕ್ಕೆ ಇಲ್ಲ ಬೇರೆ ರಾಗವನ್ನು ಹಾಡೆಂದು ಆಜ್ಞೆ ಬರುತ್ತಿತ್ತು. 'ಎಷ್ಟುಹೊತ್ತಿಗೆ ಈ ಕಛೇರಿ ಮುಗಿದು ಅತಿಥಿಗಳು ಮನೆಗಳಿಗೆ ತೊಲಗುತ್ತಾರೋ' ಎಂದು ಸುಂದರಿ ಕ್ಷಣಗಳನ್ನು ಎಣಿಸುತ್ತಾ ಕಾಲ ನೂಕುತ್ತಿದ್ದಳು.

ರಾತ್ರಿ ಹನ್ನೊಂದು ಘಂಟೆ ಹೊಡೆಯಿತು. ಒಬ್ಬೊಬ್ಬರಾಗಿ ಎದ್ದು ತೂರಾಡಿಕೊಂಡು ತಮ್ಮ ಗಾಡಿಗಳನ್ನು ತಲುಪಿದರು. ರಾಜರು ಅತಿಥಿಗಳನ್ನು ಕಳುಹಿಸಿಬಂದು, ಪಕ್ಕವಾದ್ಯದವರಿಗೆಲ್ಲಾ ಹೋಗಿರೆಂದು ಆಜ್ಞೆ ಮಾಡಿ ಸುಂದರಿಯನ್ನು ಹತ್ತಿರ ಬಂದು ಕುಳಿತುಕೊಳ್ಳೆಂದು ಸಂಜ್ಞೆ ಮಾಡಿದರು. ನಿದ್ರೆಯೊಂದು ಕಡೆ ಎಳೆಯುತ್ತಿತ್ತು; ರಾಜರು ಒಂದು ಕಡೆ ಎಳೆಯುತ್ತಿದ್ದರು. ಏನು ಮಾಡಬೇಕೆಂದು ನಿರ್ಧರಿಸಲಾಗದೆ ಆಕಳಿಸುತ್ತಾ ರಾಜರ ಬಳಿ ಒಂದು ಕುಳಿತಳು. ಪಕ್ಕದಲ್ಲಿದ್ದ ಗಾಜಿನ ಎರಡು ಪಾತ್ರೆಗಳಿಗೆ ಮದ್ಯವನ್ನು ಬಗ್ಗಿಸಿ

"ತೆಗೆದುಕೋ. ನನ್ನ ಆರೋಗ್ಯಕ್ಕೆ ಕುಡಿ. ನಾನು ನಿನ್ನ ಆರೋಗ್ಯಕ್ಕೆ ಕುಡಿಯುತ್ತೇನೆ."

ಎಂದು ಹೇಳುತ್ತಾ ತಮ್ಮ ಪಾತ್ರೆಯನ್ನು ಬರಿದುಮಾಡಿಬಿಟ್ಟರು. ಸುಂದರಿ ರಾಜರನ್ನೇ ನೋಡುತ್ತಾ ಪಾತ್ರೆಯನ್ನು ಮುಟ್ಟದೆ ಸುಮ್ಮನೆ ಕುಳಿತಿದ್ದಳು. ರಾಜರು ಮತ್ತೆ ತಮ್ಮ ಪಾತ್ರೆಗೆ ಮದ್ಯವನ್ನು ಬಗ್ಗಿಸಿಕೊಂಡು

"ತೆಗೆದುಕೋ. ಸಂಕೋಚವೇಕೆ? ಮದ್ಯ ದೇಹಕ್ಕೆ ತುಂಬಾ ಆರೋಗ್ಯಕರ."

ಎಂದು ತೊದಲುತ್ತಾ ಸುಂದರಿಯ ಕಡೆ ನೋಡುತ್ತಾ ಕುಳಿತರು. ಮದ್ಯದ ಅಮಲಿನಲ್ಲಿ ತೇಲುತ್ತಿದ್ದ ಆ ಕಣ್ಣುಗಳಲ್ಲಿ ಉಕ್ಕುತ್ತಿದ್ದ ನೀಚಕಾಮ ಸುಂದರಿಯ ದೇಹದ ಭಾಗಭಾಗವನ್ನೂ ಕಂಪಿಸುವಂತೆ ಮಾಡಿತು. ಆ ಬಾಳಿನ ಬಗ್ಗೆ ತನ್ನಲ್ಲಿ ಉಕ್ಕಿಬರುತ್ತಿದ್ದ ತಿರಸ್ಕಾರ... ಆ ವರ್ತನೆಯಿಂದ ತನಗಾಗುತ್ತಿದ್ದ ನೋವು ಇವುಗಳು ಒಮ್ಮೆಲೇ ಅವಳ ಮುಖದ ಮೇಲೆ ಕಂಡುಬಂದುವು.

ಆದರೆ ರಾಜರ ಕಣ್ಣುಗಳನ್ನು ಅಮಲಿನ ತೆರೆ ಮುಚ್ಚಿಬಿಟ್ಟಿತ್ತು. ಸುಂದರಿ ತಮ್ಮ ಮಾತುಗಳನ್ನು ನಿರ್ಲಕ್ಷಿಸುತ್ತಿದ್ದಾಳೆಂದು ರಾಜರು ಭಾವಿಸಿಕೊಂಡು ತುಸು ಕುಪಿತರಾಗಿ

"ಕುಡಿಯುವುದಿಲ್ಲವೇ? ನೊಂಡುತನ ಮಾಡುವೆಯಾ?"

"ಇಲ್ಲ ದೊರೆಗಳೇ. ಇದೊಂದನ್ನು ಕ್ಷಮಿಸಿರಿ. ಇಲ್ಲಿಗೆ ನನ್ನನ್ನು ಎಳೆಯಬೇಡಿ."

"ರಂಡೇ....ನನ್ನ ಅನ್ನವನ್ನು ಉಂಡು ನನ್ನ ಮಾತಿಗೆ ಎದುರು ಹೇಳುವೆಯಾ"

ಎಂದು ಬಲವಂತದಿಂದ ತನ್ನ ಕೈಯಲ್ಲಿದ್ದ ಪಾತ್ರೆಯ ಮದ್ಯವನ್ನು ಅವಳ ಗಂಟಲಿಗೆ ಹುಯಿದು, ಅವಳು ಪಡುತ್ತಿದ್ದ ಪಾಡನ್ನು ನೋಡುತ್ತಾ ಖಿಲಖಿಲನೆ ನಗುತ್ತಾ ಕುಳಿತರು. ಸುಂದರಿಯು ಶಾಪ ಹಾಕಿದಳು—ದೀರ್ಘವಾಗಿ ಅತ್ತಳು—ತನ್ನನ್ನು ಮುಟ್ಟಲು ಬಂದ ರಾಜರನ್ನು ಒಂದೆಡೆಗೆ ತಳ್ಳಿ ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡು ಮಲಗಿಬಿಟ್ಟಳು. ರಾಜರು ಅವಳ ಕೋಣೆಯ ಕದವನ್ನು ಒದೆಯಲಾರಂಭಿಸಿದರು. ಮೊದಲು ಅಂಗಲಾಚಿದರು, ಆಸೆಯಿಟ್ಟರು, ಭಯ ತೋರಿಸಿದರು—ಏನುಮಾಡಿದರೂ ಬಾಗಿಲು ಮಾತ್ರ ತೆರೆಯಲಿಲ್ಲ. ಬೇಸರಗೊಂಡು ಸುಂದರಿಯನ್ನು ಬಾಯಿಗೆ ಬಂದಂತೆ ಬಯ್ದುಕೊಳ್ಳುತ್ತಾ ತಮ್ಮ ಶಯ್ಯಾಗೃಹದಕಡೆಗೆ ಸಾಗಿದರು.

ರಾತ್ರಿಯೆಲ್ಲಾ ಅತ್ತು ಅತ್ತು ಕಣ್ಣುಗಳೆರಡೂ ಕೆಂಪಗೆ ಊದಿದವಲ್ಲದೆ ಮತ್ತೆ ಮನಸ್ಸಿಗೆ ಯಾವ ಸಮಾಧಾನವೂ ದೊರೆಯಲಿಲ್ಲ. ತನ್ನ ಬಾಳು ತೆಗೆದುಕೊಳ್ಳುತ್ತಿದ್ದ ಸ್ವರೂಪವನ್ನು ನೆನೆನೆನೆದು, ಹಣೆಹಣೆ ಚಚ್ಚಿಕೊಂಡಳು. 'ಅಯ್ಯೋ, ಅಷ್ಟು ಕಷ್ಟದಿಂದ ನನ್ನನ್ನು ರಾಮಕ್ಕ ಸಾಕಿ ಕೊನೆಗೆ ಈ ಹಾಳು ಜೀವನಕ್ಕೆ ಹಾಕಿದಳೇಕೆ' ಎಂದು ರಾಮಕ್ಕನನ್ನು ನಿಂದಿಸುವಳು. ಮರುಕ್ಷಣವೇ ಆಕೆಯ ನಿಸ್ವಾರ್ಥಬುದ್ಧಿಯು ನೆನಪಾಗಿ 'ವಿದ್ಯೆ ಹೇಳಿ, ಕೊನೆಗೆ ನನ್ನನ್ನು ಚಂದ್ರಮ್ಮ ವೇಶ್ಯಾವೃತ್ತಿಗೆ ಇಳಿಸಿದಳೇಕೆ' ಎಂದು ಆಕೆಯನ್ನು ನಿಂದಿಸುವಳು. ಚಂದ್ರಮ್ಮನ ಬಾಳು, ಅವಳ ವಂಶಪಾರಂಪರ್ಯವಾದ ವೃತ್ತಿ ಜ್ಞಾಪಕಕ್ಕೆ ಬಂದು, 'ಅವಳನ್ನೇಕೆ ದೂಷಿಸಲಿ' ಎಂದುಕೊಂಡು ಸುಮ್ಮನಾಗುವಳು. ತನ್ನ ವಿಚಾರದಲ್ಲಿ ಯಾರೂ ಅಪರಾಧಿಗಳಲ್ಲ;

ಆದರೆ ಎಲ್ಲರೂ ಅಪರಾಧಿಗಳು. ಹೆಣ್ಣು ಬಾಳಿನ ಅಸಹಾಯಕತೆಯನ್ನು ನೆನೆದು ಎದೆಬಿರಿಯುವಷ್ಟು ಮರುಗಿದಳು. ಕೊನೆಗೆ ಇದಕ್ಕೆ ಪ್ರಾಣವನ್ನು ನೀಗಿ ಕೊಳ್ಳುವುದೊಂದೇ ಮಾರ್ಗವೆಂದು ನಿಶ್ಚಯಿಸಿಕೊಂಡಳು. ಆದರೆ ಹೆತ್ತತಾಯಿ ಗಿಂತಲೂ ಹೆಚ್ಚಿನ ಪ್ರೇಮದಿಂದ ಸಾಕಿ ಸಲಹಿದ ರಾಮಕ್ಕನನ್ನು ಒಂದು ಬಾರಿ-ಒಂದೇ ಬಾರಿ ನೋಡಿ ಈ ಪಾಳು ಲೋಕದ ವ್ಯಾಪಾರವನ್ನು ಮುಗಿಸಿಬಿಡುವು ದೆಂದು ನಿರ್ಧರಿಸಿಕೊಂಡಳು. ಮತ್ತೆ ಏನೋ ಯೋಚನೆ ಹೊಳೆಯಲು ದೀಪ ಗಳನ್ನಾರಿಸಿ ಮೆಲ್ಲನೆ ಬಾಗಿಲು ತೆರೆದು ಪುಟ್ಟು ಮಲಗಿದ್ದ ಕೋಣೆಗೆ ಹೋಗಿ ಅವನನ್ನು ಕರೆದುಕೊಂಡು, ಕೈಗೆ ಸಿಕ್ಕಿದ ನಾಲ್ಕು ಒಡವೆ ವಸ್ತ್ರಗಳನ್ನು ಕಟ್ಟಿಕೊಂಡು ಆ ಮನೆಯಿಂದ ಹೊರಬಿದ್ದು, ದಾರಿಯಲ್ಲಿ ಸಿಕ್ಕಿದ ಟಾಂಗಾ ಹತ್ತಿ ರೈಲ್ವೆಯ ಸ್ಟೇಷನ್ನಿನ ವೆಯ್ಟಿಂಗ್ ರೂಮಿನಲ್ಲಿ ರಾತ್ರಿಯನ್ನು ಕಳೆದು ಬೆಳಿಗ್ಗೆ ಬೆಂಗಳೂರು ಗಾಡಿಯನ್ನು ಹತ್ತಿ ದೊಡ್ಡ ನಿಟ್ಟುಸಿ ರೊಂದನ್ನು ಬಿಟ್ಟಳು.

ಅಂದು ಮಧ್ಯಾಹ್ನ ಊಟಮಾಡಿ ಎಂಜಲೆಲೆಯನ್ನು ಬಿಸಾಡಲು ರಾಮಕ್ಕ ಹೊರಗೆ ಬಂದಾಗ, ತನ್ನ ಕುತ್ತಿಗೆಯನ್ನು ಅಪ್ಪಿದವರು ಯಾರೆಂದು ಗ್ರಹಿಸಲು ಮೊದಲು ಸ್ವಲ್ಪ ಕಷ್ಟಪಟ್ಟಳು. ಸುಂದರಿಯ ಧ್ವನಿ ಕೇಳಿ

"ಬಂದೆಯಾ ನನ್ನ ತಾಯೀ. ಎಷ್ಟು ದಿನ ಹೋಗಿಬಿಟ್ಟೆ ಮಗೂ" ಎಂದು ಅಳುತ್ತಿದ್ದ ಸುಂದರಿಯನ್ನೂ ಒಳಗೆ ಕರೆದೊಯ್ದಳು.

ಆಗತಾನೆ ಭೋಜನವನ್ನು ತೀರಿಸಿಕೊಂಡು ಚಂದ್ರಮ್ಮ ಭಟ್ಟರಿಗೆ ವೀಳೆಯದೆಲೆಯನ್ನು ಮಡಿಸಿಕೊಡುತ್ತಾ ಪಕ್ಕದಲ್ಲಿ ಕುಳಿತಿದ್ದವಳು ಸುಂದರಿ ಯನ್ನು ಕಂಡಕೂಡಲೆ ಬೆಚ್ಚಿಬಿದ್ದಳು. ಉದ್ವೇಗದಿಂದ ಓಡಿ ಬಂದು ತನ್ನ ಕೊರಳನ್ನಪ್ಪಿದ ಸುಂದರನನ್ನು ಸಂತೈಸುತ್ತಾ ಮೆಲ್ಲನೆ ಒಂದೊಂದಾಗಿ ನಡೆದ ಸಂಗತಿಯನ್ನೆಲ್ಲಾ ತಿಳಿದುಕೊಂಡು ಅವಳಿಗೆ ಸಮಾಧಾನ ಹೇಳಿ ಊಟಮಾಡಿ ಬಾರೆಂದು ಒಳಕ್ಕೆ ಕಳುಹಿಸಿ ಬಂದು ಭಟ್ಟರ ಪಕ್ಕದಲ್ಲಿ ಕುಳಿತಳು. ಭಟ್ಟರೂ ಏನೋ ಚಿಂತೆಯಲ್ಲಿ ಮುಳುಗಿದಂತಿತ್ತು. ಸ್ವಲ್ಪಕಾಲ ಇಬ್ಬರೂ ಮೌನವಾಗಿ ಎದುರಿಗಿದ್ದ ವೀಳೆಯದೆಲೆಯ ಕಟ್ಟನ್ನು ಕರಗಿಸುತ್ತಾ ಬಂದರು. ವೀಳೆಯ ದೆಲೆ ಮುಗಿಯುತ್ತ ಬಂದಿತಲ್ಲದೆ ಭಟ್ಟರು ಮಾತನ್ನಾರಂಭಿಸುವ ಸೂಚನೆಯೇ ತೋರಿಬರಲಿಲ್ಲ. ಕೊನೆಗೆ ಈ ಮೌನಸ್ಪರ್ಧೆಯಿಂದ ಸುಖವಿಲ್ಲವೆಂದು

ಚಂದ್ರಮ್ಮ ತಾನೇ ಆರಂಭಿಸಿದಳು,

"ಹುಡುಗಿ ತಂದಿತು ತಲೆಗೆ ಕಲ್ಲು...."

"ಏನು ಹಾಗೆಂದರೆ."

"ಆ ಕೃಷ್ಣಾಪುರದ ಗುಗ್ಗು ಹತ್ತಿರ ವ್ಯಾಜ್ಯ ಕಾದುಕೊಂಡು ಬರುವುದೇ? ಅವನಿಂದ ಪೊಗದಸ್ತಾಗಿಯೇ ಗಿಟ್ಟಿಸಬಹುದಾಗಿತ್ತು. ಒಂದೆರಡು ತಿಂಗಳಾಗ ಲೀಂತ ನಾನು ಸುಮ್ಮನಿದ್ದೆ."

"ಅಷ್ಟು ಅಭಿಮಾನಪಡುವವಳು ನೀನೇ ಹೋಗಬೇಕಾಗಿತ್ತು."

"ಸರಿ. ನಾನು ಹೋಗುವ ಹಾಗಿದ್ದರೆ ನಿಮ್ಮನ್ನು ಇಲ್ಲಿಯ ತನಕ ಯಾರು ಬಿಡುತ್ತಿದ್ದರು. ಕಾಡು ಹರಟೆಯಿರಲಿ—ಮುಂದೇನು ಗತಿ."

"ಏನು ಅಹನ್ಯಹನಿ ಕಾಲಕ್ಷೇಪಕ್ಕೆ ಒಂತೇ ಪ್ರಸಂಗ"

"ಇಲ್ಲಾಂದ್ರೆ....ಯಾವಾಗಲೂ ನಿಮ್ಮದು ಕುಚೋದ್ಯವೇ? ಅವನು ಏನಾದರೂ ಹುಡುಕಿಕೊಂಡು ಒಂದ್ರೆ."

"ಸುಂದರಾ ಇಲ್ಲಾಂತ ಹೇಳಿ ಬಿಡೋದು."

"ಪೋಲೀಸಿನವರನ್ನು ಕರೆತಂದರೆ........"

"ನಾವೇನು ಪತ್ರ ಬರೆದುಕೊಟ್ಟದ್ದೇವೆಯೇ? ಅಷ್ಟು ದೂರ ಅದು ಹೋಗಲ್ಲ ಸುಮ್ಮನಿರು."

"ಒಳ್ಳೆಯ ಭಾರಿಯ ಕುಳ ಹೋಯಿತಲ್ಲಾ ಎಂದು ನನ್ನ ಚಿಂತೆ ಒಂದು ಸಲ ಸುಂದರೂಗೆ ಹೇಳಿ ನೋಡಿದರೋ?"

"ನಿನಗೆ ಹುಚ್ಚು ಹಿಡಿದಿದೆ ಎಂದೆನ್ನುತ್ತಾರಷ್ಟೆ ನೋಡಿದವರು. ಅವಳು ಬೇಜಾರು ಮಾಡಿಕೊಂಡು ಬಂದಿದ್ದಾಳೆ. ಇನ್ನು ನೀನು ಬಲವಂತ ಮಾಡು, ಕೆರೆಯೋ ಭಾವಿಯೋ ಹುಡುಕಿಕೊಳ್ಳಲಿ, ಆಮೇಲೆ ಸಾಯುವ ತನಕ ಕೋರ್ಟು ಕಛೇರಿ ಹತ್ತುವಿಯಂತೆ."

"ಅದೂ ನ್ಯಾಯವೇ? ಹಾಗಾದರೆ ಮುಂದೆ ಸುಂದರಸಿಗೆ ಏನು ಮಾಡಬೇಕೆನ್ನುತ್ತೀರಿ."

"ನಾಲ್ಕು ದಿವಸ ಸುಮ್ಮನೆ ಅವಳನ್ನು ಬಿಟ್ಟುಬಿಡು. ಉಂಡೂ ತಿಂದೂ ಸುಖವಾಗಿರಲಿ. ಅಷ್ಟು ಹೊತ್ತಿಗೆ ನಾನು ಏನಾದರೂ ಮಾಡುತ್ತೇನೆ. ಕಣ್ಣೀನೋ ಇಟ್ಟಿದ್ದೇನೆ....ಆದರೆ ಮಾತು ಅವನಿಂದಲೇ ಆರಂಭವಾಗಲಿ

ಎಂದು ಸುಮ್ಮನಿದ್ದೇನೆ."

"ಯಾರೊಂದ್ರೆ. ಪರವಾಗಿಲ್ಲವೋ?"

"ಏನು ಕೇಳುತ್ತೀ—ಹುಚ್ಚೀ. ಮುಂದೆ ಹೈಕೋರ್ಟಿನ ಜಡ್ಜ್ ಆಗೋ ಕುಳ. ಭಾರೀ ಲಾಯರು. ತಿಂಗಳಿಗೆ ಒಂದು ಒಂದೂವರೆ ಸಾವಿರದ ಆದಾಯ. ಮದುವೆಯಿಲ್ಲ. ಸದ್ಯಕ್ಕೆ ಯಾವುದನ್ನೋ ಕಷ್ಟವಾಳ ಮಾಡಿಕೊಂಡಿದ್ದಾನೆ. ಬೇರೆಯೊಂದರ ತನಿಖೆಯಲ್ಲಿ ಇದ್ದಾನಂತೆ...ನನಗೆಲ್ಲಾ ಸಮಾಚಾರ ಬಂದಿದೆ. ನೀನು ಯೋಚನೆ ಬಿಡು. ಸುಂದರನ್ನ ಕೊಂಚ ಚೆನ್ನಾಗಿ ನೋಡಿಕೊಂಡು, ಎಣ್ಣೆಯೊತ್ತಿ ನೀರುಹಾಕಿ, ಸ್ವಲ್ಪ ಬಾದಾಮಿ ಲೇಹ್ಯ ಗೀಹ್ಯ ಮಾಡಿಕೊಡು. ಸುಮ್ಮನಾಯಿತೇ ಜೀವನ. ಕಷ್ಟಕಾರ್ಪಣ್ಯ ತಡೆಯಬೇಕಲ್ಲ."

"ಹೂಂ. ಹಾಗೆಯೇ ಆಗಲಿ" ಎಂದು ನಗುತ್ತಾ ಚಂದ್ರಮ್ಮ ನುಡಿದಳು.

೧೦

ಲಲಿತಮ್ಮನಿಗೆ ಏನು ಏನೋ ಬಯಕೆಗಳು. ಅವುಗಳೆಲ್ಲವೂ ಸ್ವಾಮಿಯ ಔದಾರ್ಯದಿಂದ ಪೂರ್ಣಗೊಳ್ಳುತ್ತಿದ್ದವು. ಉತ್ತಮ ತೀರ್ಥಕ್ಷೇತ್ರಗಳನ್ನು ನೋಡಬೇಕೆಂದು ಒಮ್ಮೆ ಬಯಸಿದಳು. ಸ್ವಾಮಿಗೆ ಅವುಗಳಲ್ಲಿ ಅಷ್ಟು ವಿಶ್ವಾಸ ಗೌರವಗಳಿಲ್ಲದಿದ್ದರೂ ತನ್ನ ಪ್ರೇಯಸಿಯ ಇಷ್ಟಾರ್ಥ ತೃಪ್ತಿಗಾಗಿ ಶೃಂಗಗಿರಿ, ತಿರುಪತಿ, ಕಂಚಿ, ಮಧುರೆ ಮುಂತಾದ ಕೆಲವು ಜಾಗಗಳಿಗೆ ಅವಳೊಂದಿಗೆ ಹೋಗಿ ಬಂದ. ದಿನಗಳೆಯುತ್ತ ಕಳೆಯುತ್ತ ಲಲಿತಮ್ಮನ ಮನಸ್ಸಿನ ಆಸೆಗಳು ಬಗೆಬಗೆಯ ಆಕಾರವನ್ನು ತಳೆಯಲಾರಂಭಿಸಿದವು. ದೀನ ದರಿದ್ರರಿಗೆ ಕೈತುಂಬ ನೀಡುವುದೊಂದು ಆಕೆಯ ನಿತ್ಯಗೆಲಸವಾಗಿ ಹೋಗಿತ್ತು. ಈಗಂತೂ ಗತಿಯಿಲ್ಲವೆಂದು ಮನೆಯ ಬಾಗಿಲಿಗೆ ಯಾರು ಬಂದರೂ ಅವರು ಸಂತೃಪ್ತಿಗೊಂಡು ಹೋಗುವವರೆಗೆ ಸಮಾಧಾನ ಹೊಂದಳು. ಯಾವಾಗ ನೋಡಲಿ ಕೈಯಲ್ಲಿ ಯಾವದಾದರೊಂದು ಭಗವದ್ಗೀತಾ ಭಾಷಾಂತರವನ್ನು ಹಿಡಿದು ಅದನ್ನು ಮನನಮಾಡಿಕೊಳ್ಳಲು ತನ್ನೊಂದಿಗೇ ಹೋರಾಡುತ್ತಿರುವಳು. ಸ್ವಾಮಿ ಮನೆಗೆ ಬರುವುದು ಒಂದರೆಕ್ಷಣ ತಡವಾದರೆ ನೂರು ಬಾರಿ ಬಾಗಿಲ ಬಳಿ ಹೋಗಿ ಅವನು ಬರುವ ದಾರಿಯನ್ನೇ ನೋಡುತ್ತ

ನಿಂತಿದ್ದು ನಿರುತ್ಸಾಹದಿಂದ ಹಿಂದಿರುಗುವಳು. ತನ್ನ ಸ್ಥಿತಿಯನ್ನು ನೆನೆದು ತಾನೇ ಹಿಗ್ಗುವಳು. ಒಮ್ಮೊಮ್ಮೆ ಯಾವದೋ ಸಂಶಯದ ನೆರಳುಬಿದ್ದು ಸ್ವಲ್ಪ ಕಾಲ ಮನಸ್ಸನ್ನಿರಿಯುವುದು. ಅದಕ್ಕೆ ಸ್ವಾಮಿಯ ಮಾತುಕತೆಗಳನ್ನು ಜ್ಞಾಪಿಸಿಕೊಂಡು ಸಮಾಧಾನ ಹೇಳಿಕೊಳ್ಳುವಳು.

ಸ್ವಾಮಿ ಬರುವ ಹೊತ್ತಿಗೆ ಕೇಸರಿ ಬಣ್ಣದ ಹೊಸ ಸೀರೆಯನ್ನು ಧರಿಸಿ, ಅದೇ ಬಣ್ಣದ ಕುಪ್ಪಸವನ್ನು ತೊಟ್ಟು, ಜಡೆಯ ಬದಲು ಹೆರಳು ಹಾಕಿಕೊಂಡು, ಹೆರಳಿನ ಸುತ್ತಲೂ ಅರೆಅರಳಿದ ಮಲ್ಲಿಗೆಯನ್ನು ಮುಡಿದು, ತುಟಿಗೆ ಕೆಂಪಡರುವಂತೆ ತಾಂಬೂಲವನ್ನು ಸವಿದು, ಆ ವಾರದ 'ಸಚಿತ್ರ ಭಾರತ'ವನ್ನು ನೋಡುವ ನೆವಮಾಡಿಕೊಂಡು ಅವನನ್ನು ಕಾಯುತ್ತಾ ನಿಂತಿದ್ದಳು. ಪ್ರಿಯನ ಆಗಮನದ ವಿಳಂಬದ ನೋವನ್ನು ಮರೆಯಲು ಮಾಡಿದ ಪ್ರಯತ್ನವೆಲ್ಲವೂ ನಿಷ್ಫಲವಾಗುತ್ತಿದ್ದವು. ಕೊನೆಗೆ ಅಂದು ತುಸುಹೊತ್ತು ಮೀರಿಯೇ ಸ್ವಾಮಿ ಮನೆಗೆ ಬಂದು, ಲಲಿತೆಯ ತುಂಬು ಸೌಂದರ್ಯವನ್ನು ಕದ್ದು ಕದ್ದು ತನ್ನ ಮನೋಮಂದಿರದಲ್ಲಿ ತುಂಬುತ್ತಾ ಅವಳ ಬಳಿ ಕುಳಿತ. ಮುನಿಸು ಪ್ರಿಯೆಯ ಮುಖದ ಮೇಲೆ ಹಿಡಿಯುವಾಟವಾಡುತ್ತಿದ್ದುದು ಸ್ವಾಮಿಗೆ ತಿಳಿಯಲು ಬಹಳ ಹೊತ್ತೇನೂ ಆಗಲಿಲ್ಲ.

"ಕೋಪ ಬಂದಿದೆಯೇನೂ" ಎಂದು ಮುಖಕ್ಕೆ ಮುಖವಿಟ್ಟು ತಾನೂ ಕೋಪವನ್ನು ನಟಿಸಿದ. ಲಲಿತೆ ಮುಖವನ್ನು ಬೇರೆ ಕಡೆ ತಿರುಗಿಸಿದಳೇ ವಿನಾ ಸ್ವಾಮಿಯ ಪ್ರಶ್ನೆಗೆ ಉತ್ತರ ಕೊಡಲಿಲ್ಲ.

"ಹಾಗಾದರೆ ನೀನು ಮೂಕಿಯೇನು."

ಅದಕ್ಕೂ ಉತ್ತರವಿಲ್ಲ.

"ನಿನಗೆ ಕೋಪ ಇಳಿದ ಮೇಲೆ ಬಂದು ಮಾತನಾಡಿಸುತ್ತೇನೆ"

ಎಂದು ಮೆಲ್ಲನೆ ಎದ್ದ. ಲಲಿತೆ ಅವನ ಕಡೆ ತಿರುಗಿ ಕರುಣಾಪೂರಿತ ದೃಷ್ಟಿಯಿಂದ ನೋಡಿದಳು. ಸ್ವಾಮಿ ಕಾಲವಿಳಂಬಮಾಡದೆ ಲಲಿತೆಯನ್ನಪ್ಪಿ, ಪ್ರೇಮಪೂಜೆಯನ್ನಾರಂಭಿಸಿಬಿಟ್ಟ. ಲಲಿತೆ ಈ ಬಾರಿ ನಿಜವಾಗಿಯೂ ಕುಪಿತಳಾಗಿ "ನನ್ನ ಹೆರಳೆಲ್ಲಾ ಹಾಳುಮಾಡಿಬಿಟ್ಟರಿ" ಎಂದು ಕೂಗಿ ಕೈ ಕಿತ್ತು ಹಾಕಿದಾಗಲೇ ಅವನಿಗೆ ಎಚ್ಚರ. ವ್ಯಾಜ್ಯ ಕೊನೆಗೆ ಬಂದಿತು. ಲಲಿತೆ ಹೆರಳು ಸರಿಮಾಡಿಕೊಳ್ಳುತ್ತಾ

"ಕೊನೆಗೆ ಮನೆಗೆ ಬಂದೇ ಬಿಟ್ಟಿರಿ. ನಿಮಗೆ ಮನೆ ಇರುವುದು ಮರೆತು ಹೋಯಿತೇನೋ ಎಂದಿದ್ದೆ."

"ಹೊತ್ತಾಯಿತು ರನ್ನಾ. ಕೊಂಚ ಕೆಲಸ ಹೆಚ್ಚು ಈಗ. ಆ ಆನಂದ ಗಿರಿ ಪೀಠದ ಏಜೆಂಟ್ ಭಟ್ಟ ಬೇರೆ ಹೊರಡುವ ಹೊತ್ತಿಗೆ ಸರಿಯಾಗಿ ಬಂದ."

"ಅವನು ಬಂದ—ನೀವು ಸಾವಕಾಶವಾಗಿ ಹರಟೆಗೆ ಕುಳಿತೇ ಬಿಟ್ಟಿರಿ."

"ಹರಟೆಗೆ ಕುಳಿತುಕೊಳ್ಳುತ್ತೇನೆಯೇ ಹೇಳು. ಮಠದವರು ಅವನನ್ನು ಕೆಲಸದಿಂದ ಓಡಿಸಿಬಿಟ್ಟರಂತೆ, ಅವರಿಗೆ ನೋಟೀಸ್ ಕೊಡಿಸುವುದಕ್ಕೆಂದು ಬಂದಿದ್ದ."

"ಇರಬಹುದು. ನಿಮಗೆ ಮನೆಗಿಂತಾ ಕೆಲಸವೇ ಹೆಚ್ಚಲ್ಲವೇ?"

"ಕಷ್ಟಸುಖ ನೀನು ಕಾಣೆಯಾ ಚಿನ್ನಾ. ನಾಲ್ಕು ಕಾಸು ಬರುವ ದಿನ ಇದು. ಈಗ ಬಿಟ್ಟರೆ ನಾಳೆ ಬಾಯಿಬಾಯಿ ಬಿಡಬೇಕಾಗುತ್ತದೆ."

"ಏನೋ—ಹೋಗಿ ಅಂದ್ರೆ—ನೀವು ನನ್ನ ಬಲು ಗೋಳುಹುಯಿದು ಕೊಳ್ಳುತ್ತೀರಿ."

ಎಂದು ನಗುತ್ತಾ ನುಡಿದಳು. ಆ ಸರಳ ನಗುವಿನೊಂದಿಗೆ ಸ್ವಾಮಿ ತನ್ನ ಆತ್ಮವನ್ನೂ ತೇಲಿಬಿಟ್ಟ. ಮೊದಲು ಯಾವದೋ ಒಂದು ರೀತಿಯಲ್ಲಿ ಆರಂಭವಾದ ಸ್ನೇಹ, ಸ್ವಾಮಿ ಲಲಿತೆಯರನ್ನು ಈಗ ಶಾಶ್ವತವಾದ ಪ್ರೇಮ ಬಂಧನದಲ್ಲಿ ಕೂಡಿಸುವ ಹಂಚಿಕೆಯನ್ನು ಹೂಡಿತ್ತು. 'ಒಮ್ಮೆ ಮುಖ ನೋಡಿ ಹೊರಟು ಹೋಗುವ' ಎಂದು ಬಂದ ಅತಿಥಿಗಳನ್ನು ಶಾಶ್ವತವಾಗಿ ಮನೆಯಲ್ಲಿ ಉಳಿಸಿಕೊಳ್ಳುವ ಯತ್ನದಂತಹ ಯತ್ನ ನಡೆದಿತ್ತು. ತಾನು ಜೀವನದಲ್ಲಿ ಕೋರುತ್ತಿದ್ದ ಸೌಭಾಗ್ಯಸಂಪತ್ತನ್ನು ದೊರಕಿಸಿಕೊಂಡುದಕ್ಕಾಗಿ ಲಲಿತೆಗಂತೂ ಹಿಡಿಸಲಾರದಷ್ಟು ಆನಂದ; ಏನೋ ಧರ್ಮ ಕರ್ಮ ಸಂಯೋಗ ದಿಂದ ತನ್ನವಳಾದ ಲಲಿತೆಯ ನಿಸ್ಸೀಮ ಪ್ರೇಮವನ್ನು ಕಂಡು ಸ್ವಾಮಿಗೆ ಹೊರಗೆ ಉಚ್ಚರಿಸಲಾಗದಷ್ಟು ಗೌರವ. ಒಮ್ಮೊಮ್ಮೆ ತಾನು ಮಾಡಿದ್ದು ನ್ಯಾಯವೇ ಎಂದು ಯೋಚಿಸುವನು. ರಾಮಕೃಷ್ಣಯ್ಯನ ಸ್ವತ್ತನ್ನು ಅನ್ಯಾಯ ದಿಂದ ತಾನು ದತ್ತಾಪಹಾರ ಮಾಡಿಕೊಂಡಂತಾಗಲಿಲ್ಲವೇ? ಧರ್ಮ, ನೀತಿ, ಸಮಾಜದ ಸುವ್ಯವಸ್ಥೆಗಳೆಲ್ಲವನ್ನೂ ಅತಿಕ್ರಮಿಸಿ ನಡೆದಂತಾಗಲಿಲ್ಲವೇ? ಎಂದು

ಚಿಂತಿಸುವನು. ಮರುಕ್ಷಣವೇ ಬೇಡದ ವರನಿಗೆ ಕನ್ಯೆಯನ್ನು ಕೊಡುವುದು ಯಾವ ಧರ್ಮ, ಯಾವ ನೀತಿ, ಯಾವ ವ್ಯವಸ್ಥೆ?—ಹೆಂಗಸನ್ನು ದನಕರುವಿನಂತೆ ದಾನಮಾಡುವುದು ಯಾವ ನ್ಯಾಯ? ವ್ಯಕ್ತಿಯ ನಡತೆಯ ಮೇಲೆ ನೀತಿ ಧರ್ಮದ ನಿಯಮವನ್ನು ಹೊರಸಲು ಸಮಾಜಕ್ಕೆ ಏನು ಹಕ್ಕುಂಟು? ಸಮಾಜ ವ್ಯಕ್ತಿಗೆ ಮಾಡುತ್ತಿರುವ ಮಹದುಪಕಾರವಾದರೂ ಏನು? ಎಂಬಿವೇ ಪ್ರಶ್ನೆಗಳು ಮನಸ್ಸಿನ ಚಿಂತೆಯನ್ನು ಕೊಚ್ಚಿಹಾಕಿಬಿಡುತ್ತಿದ್ದವು. ಪ್ರೇಮದ ಸಹಜಕರೆಗಿಂತಲೂ ಉಚ್ಚವಾದದ್ದು, ಧರ್ಮಸಮ್ಮತವಾದದ್ದು, ನ್ಯಾಯವಾದದ್ದು ಬೇರೊಂದಿಲ್ಲವೆಂಬ ತತ್ತ್ವ ಸ್ವಾಮಿಯ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡುತ್ತಿತ್ತು.

ಮಾರನೆಯ ದಿವಸ ಪ್ರಾತಃಕಾಲ ಲಲಿತೆಯ ಪ್ರಯಾಣ ಸಿದ್ಧವಾಗಿತ್ತು. ರಾಮಕೃಷ್ಣಯ್ಯ ಹೆಂಡತಿಯನ್ನು ಆಕೆಯ ತೌರುಮನೆಗೆ ಬಾಣಂತಿತನಕ್ಕಾಗಿ ಕರೆದುಕೊಂಡು ಹೋಗಿ ಬಿಟ್ಟು ಬರಬೇಕೆಂದು ಮೊದಲೇ ಗೊತ್ತಾಗಿತ್ತು. ಸ್ವಾಮಿಗೆ ಇದು ಸರ್ವಥಾ ಒಪ್ಪಿಗೆಯಿಲ್ಲ; ಆದರೆ ಚೊಚ್ಚಲು ಮಗುವೆಂದು ಲಲಿತೆಯ ತೌರುಮನೆಯವರು ಮಾಡಿದ ಬಲವಂತಕ್ಕೆ ಅವನು ಒಪ್ಪಿಕೊಳ್ಳಬೇಕಾಯಿತು.

"ಹಾಗಾದರೆ ಇನ್ನು ಎಂಟು ತಿಂಗಳು ನಿನ್ನನ್ನು ಕಾಣುವ ಯೋಚನೆಯನ್ನೇ ಬಿಡಬೇಕಲ್ಲವೇ?"

"ಯಾಕೆ ಹಾಗೆನ್ನುವಿರಿ?"

"ಈಗ ಮೂರು ತಿಂಗಳು—ಅನಂತರ ಐದು ತಿಂಗಳು—ಅಲ್ಲಿಯವರೆಗೆ ನೀನು ಮೈಸೂರು....ನಾನು ಬೆಂಗಳೂರು."

"ನನ್ನನ್ನು....ನಿಮ್ಮ....ನೋಡುವುದಕ್ಕೆ ಬರುವುದಿಲ್ಲವೇನು?"

"ಹೇಗೆ ಬರಲಿ ಚಿನ್ನಾ. ನನ್ನ ಮನಸ್ಸು ಎಲ್ಲಿರುವುದೆಂದು ನಿನಗೆ ಮತ್ತೆ ಹೇಳಬೇಕೇ?"

"ಇಲ್ಲಾ ಸರಿಯೇ. ಆದರೆ ಬರಬಾರದೇತಕ್ಕೆ?"

"ನೋಡಿದವರು ಏನನ್ನುತ್ತಾರೆ. ನಿನ್ನ ತಂದೆತಾಯಿಗಳು ಏನನ್ನುತ್ತಾರೆ. ನಾನು ಅಲ್ಲಿಗೆ ಬಂದರೆ ಮುಂದೆ ನಿನ್ನ ತಂದೆತಾಯಿಗಳ ಗತಿಯೇನು?"

"ಹಾಗಾದರೆ ಲೋಕದಲ್ಲಿ ಯಾರನ್ನು ಯಾರೂ ನೋಡುವುದೇ ಇಲ್ಲವೆ"

"ನೋಡುತ್ತಾರೆ. ಆದರೆ ನಾನು ನಿನ್ನನ್ನು ನೋಡುವ ಹಾಗಲ್ಲ."

"ಇದೆಲ್ಲಾ ಬರುವುದಿಲ್ಲನೆಂದು ಹೇಳಲು ನೀವು ಹಾಕುತ್ತಿರುವ ಪೀಠಿಕೆ ಯೆಂದು ಕಾಣುತ್ತದೆ ಮನಸ್ಸಿದ್ದಲ್ಲಿ ಮಾರ್ಗವಿದ್ದೇ ಇರುತ್ತದೆ. ನೀವು ಬನ್ನಿ....ಮುಂದಿನ ಜವಾಬ್ದಾರಿ ನನ್ನದು."

"ಹಾಗೇ ಆಗಲಿ. ಅದಕ್ಕೇತಕ್ಕೆ ನೀನು ಮನಸ್ಸಿಗಿಷ್ಟು ಚಿಂತೆ ತಂದು ಕೊಳ್ಳಬೇಕು. ಬೇಕಾದವರು ಬೇಕಾದದ್ದು ಅಂದುಕೊಳ್ಳಲಿ ನಾನು ನಿನ್ನನ್ನು ಬಂದು ನೋಡುವೆ. ಅಲ್ಲದೆ....ನನಗೂ ಆಶೆಯಿಲ್ಲದಿರುತ್ತದೆಯೇ?"

ಎಂದು ಪ್ರೇಯಸಿಯನ್ನು ಸಮಾಧಾನಪಡಿಸಿದ. ಮುಂದಿನ ಜೀವನದ ಏನು ಏನೋ ಕನಸುಗಳನ್ನು ಕಟ್ಟುತ್ತಾ ರಾತ್ರಿಯನ್ನು ಕಳೆದರು. ಮಗು ವಿಗೆ ಏನು ಹೆಸರಿಡುವುದು? ಎಂದು ಯೋಚಿಸಿ ಯೋಚಿಸಿ, ಸ್ವಾಮಿ ಮೈಸೂರಿಗೆ ಬರುವಾಗ ಹೆಸರನ್ನು ಗೊತ್ತುಮಾಡಿಕೊಂಡು ಬರುವುದೆಂದು ನಿಶ್ಚಯವಾಯಿತು ಲಲಿತೆ ಹಿಂದಿರುಗಿದ ಮೇಲೆ ಮಗುವನ್ನು ನೋಡಿ ಕೊಳ್ಳಲು ಸರಿಯಾದ ಹೆಣ್ಣಾಳನ್ನು ಎಲ್ಲಿಂದ ತರುವುದು?—ಯೋಚಿಸಿ ಕೊನೆಗೆ ಈ ವಿಷಯವನ್ನು ಲಲಿತೆಯ ತಾಯಿಗೆ ಬಿಡುವುದೆಂದು ನಿಶ್ಚಯ ವಾಯಿತು. ಜೊತೆಯಲ್ಲಿ ತಮ್ಮ ಸಂಬಂಧ ಇನ್ನೂ ಕೆಲವು ಕಾಲ ಗೋಪ್ಯ ವಾಗಿಯೇ ಇಟ್ಟಿರುವುದೆಂದು ನಿರ್ಧಾರವೂ ಆಯಿತು

ಹೊತ್ತುಹುಟ್ಟುವ ಮುನ್ನ ರಾಮಕೃಷ್ಣಯ್ಯನೇ ಎದ್ದು ನೀರಿನ ಒಲೆಗೆ ಉರಿಹಾಕಿ, ಕಾಫಿ ಕಷಾಯವನ್ನು ಸಿದ್ಧಪಡಿಸಿ, ಲಲಿತೆಯನ್ನು ಎಬ್ಬಿಸ ಹೋದ. ಆವೇಳೆಗಾಗಲೇ ಅವಳು ಎದ್ದಿದ್ದಳು. ಸ್ನಾನ, ಕಾಫಿಗಳನ್ನು ತೀರಿಸಿಕೊಳ್ಳುವ ಹೊತ್ತಿಗೆ ಮನೆಯ ಮುಂದೆ ಜಟಕ ಸಿದ್ಧವಾಯಿತು. ಸ್ವಾಮಿಯೂ ಎದ್ದು ಮುಖಮಜ್ಜನವನ್ನು ತೀರಿಸಿಕೊಂಡು ಪ್ರಿಯತಮೆಯನ್ನು ಕಳುಹಿಸಿಕೊಡಲು ಸಿದ್ಧವಾಗುತ್ತಿದ್ದ. ಹೊತ್ತು ಸಮೀಪಿಸುತ್ತಿದ್ದರೂ ಲಲಿತೆಯ ಮನಸ್ಸಿನ ದುಗುಡ ಉಪಶಮನಕ್ಕೆ ಬಂದಿರಲಿಲ್ಲ. ಎಷ್ಟು ಹೊತ್ತಾ ದರೂ ಸ್ವಾಮಿಯ ಕುತ್ತಿಗೆಯನ್ನು ಬಿಡಳು. ಸ್ವಾಮಿ ಖಂಡಿತವಾಗಿಯೂ ಮೈಸೂರಿಗೆ ಬರುವೆನೆಂದು ಮತ್ತೆಮತ್ತೆ ಮಾತುಕೊಟ್ಟು ಬಹುಪ್ರಯಾಸ ದಿಂದ ಪ್ರೇಯಸಿಯನ್ನು ಗಾಡಿ ಹತ್ತಿಸಿದ. ಕಂಬನಿ ತುಂಬಿದ್ದ ನಾಲ್ಕು ಕಣ್ಣು

ಗಳೂ ಕೂಡಿದವು. ಒಂದು ಯುಗದಲ್ಲಿ ಹೇಳಲಾಗದಷ್ಟು ಮಾತುಕತೆ ಆ ಒಂದರೆಕ್ಷಣದಲ್ಲಿ ಆಗಿಹೋಯಿತು. ಗಾಡಿ ಮೆಲ್ಲನೆ ಹೊರಟಿತು ಕಣ್ಣಿಗೆ ಗಾಡಿ ಬೀಳುವತನಕ ಸ್ವಾಮಿಯು ಲಲಿತೆಯನ್ನು ನೋಡುತ್ತ ನಿಂತಿದ್ದು, ಹೊರಲಾಗದಷ್ಟು ಭಾರಗೊಂಡಿದ್ದ ಹೃದಯವನ್ನು ಬಲವಂತದಿಂದ ಸಾಗಿಸಿಕೊಂಡು ಒಳಕ್ಕೆ ಬಂದು ದುರ್ಬಲನಾಗಿ ತೊಟ್ಟಿಯಲ್ಲಿದ್ದ ಆರಾಮು ಕುರ್ಚಿಯ ಮೇಲೆ ಕುಕ್ಕರಿಸಿಬಿಟ್ಟ.

ಎಷ್ಟು ಹೊತ್ತು ಹಾಗೆಯೇ ಚಿಂತಿಸುತ್ತಾ ಕುಳಿತಿದ್ದನೋ ಅವನಿಗೇ ತಿಳಿಯದು. ಮನಸ್ಸಿನಲ್ಲಿ ಚಿಂತೆಗಳ, ಭಾವನೆಗಳ, ಕಲ್ಪನೆಗಳ ತರಂಗ ತರಂಗಗಳೇಳುತ್ತಿದ್ದವು. ಹೃದಯ ಬಲು ಭಾರದಿಂದ ಸುಮ್ಮನೆ ತುಯ್ಯುತ್ತಿದ್ದಿತು. ಕಣ್ಣುಗಳಿಂದ ತಡೆ ಎಡೆಯಿಲ್ಲದಂತೆ ಪ್ರವಾಹ. ತನ್ನ ಅನುಭವಗಳನ್ನು ಒಂದೊಂದಾಗಿ ಜ್ಞಾಪಿಸಿಕೊಳ್ಳುತ್ತಾ ಲಲಿತೆಗೂ ತನಗೂ ಇದ್ದ ಸಂಬಂಧವನ್ನೂ ಜ್ಞಾಪಿಸಿಕೊಂಡ. ತಾನು ಅದುವರೆಗೆ ನೋಡಿದ್ದ ಯಾವ ಹೆಂಗಸೂ ಲಲಿತೆಯಂತಿರಲಿಲ್ಲ. ಲಲಿತೆಗಿಂತಲೂ ಸುಂದರಿಯರಿದ್ದರು—ಲಲಿತೆಗಿಂತಲೂ ಚತುರರಿದ್ದರು—ಲಲಿತೆಗಿಂತಲೂ ಬುದ್ಧಿವಂತವರಾದವರಿದ್ದರು; ಆದರೆ ಲಲಿತೆಯನ್ನು ಸರಿಗಟ್ಟುವವರು ಅವರಲ್ಲಿ ಯಾರೂ ಇರಲಿಲ್ಲ. ಅವಳ ಒಂದೊಂದು ಮಾತಿನಲ್ಲಿದ್ದ ಜೇನುಸವಿ, ಒಂದೊಂದು ನಗೆಯಲ್ಲಿದ್ದ ಮಾಧುರ್ಯ, ಒಂದೊಂದು ಕೊಂಕುನುಡಿಯಲ್ಲಿದ್ದ ಬೆಡಗು, ಒಂದೊಂದು ಹುಸಿಮುನಿಸಿನಲ್ಲಿದ್ದ ಮಾರ್ದವತೆ ಅವನ ಗಣನೆಯಲ್ಲಿ ಇಡೀ ಜಗತ್ತಿಗಿಂತಲೂ ಹೆಚ್ಚಿನದಾಗಿತ್ತು. ತಮ್ಮಿಬ್ಬರ ಜೀವಗಳನ್ನು ಒಂದುಗೂಡಿಸಿದ ಅಗೋಚರ ಶಕ್ತಿಯ ಲೀಲೆಯನ್ನು ಸ್ಮರಿಸಿಕೊಂಡ. ತನ್ನವರೆಂದು ಹೇಳಿಕೊಳ್ಳಲು ಯಾರೂ ಇಲ್ಲದಿರುವಾಗ 'ಲಲಿತೆ' ಯನ್ನು ತೋರಿಸಿದ ಪರಾಶಕ್ತಿಗೆ ಮಣಿದ. ಅವಳ ಹಿತದಲ್ಲಿ ತನ್ನ ಹಿತ ಬೆರಸಿ, ಅವಳ ಸುಖದಲ್ಲಿ ತನ್ನ ಸುಖ ಬೆರಸಿ, ಅವಳ ಆತ್ಮನಲ್ಲಿ ತಾನು ಆಶ್ರಯ ಪಡೆಯಬೇಕೆಂದು ನಿಶ್ಚಯಿಸಿದ. ತಕ್ಷಣವೇ ಮತ್ತೊಂದು ಸುಖದ ಸುಗ್ಗಿ ಕಣ್ಣಿಗೆ ಬಿತ್ತು. "ಈ ಸಲ ಲಲಿತಾ ಬರುವಾಗ ತನ್ನ ಮಗುವನ್ನು.... ನಮ್ಮ ಮಗುವನ್ನು ಎತ್ತಿಕೊಂಡು ಬರುತ್ತಾಳೆ" ಎಂಬುದನ್ನು ಜ್ಞಾಪಿಸಿಕೊಂಡ. ತಾನಂತೂ ತಾಯ್ತನದ ಅಮೃತವನ್ನುಂಡಿರಲಿಲ್ಲ; ತನ್ನ ಮಗು ಉಣ್ಣುವುದನ್ನಾದರೂ ಕಂಡು ಆನಂದಿಸಬೇಕೆಂದು ಅಂದುಕೊಂಡ. ತನ್ನ

ಮಗುವು ಬೆಳೆದು, ತಪ್ಪು ತಪ್ಪು ಮಾತುಗಳನ್ನು ಕಲಿತು 'ಅಪ್ಪಾ' ಎಂದು ಕೊಂಡು ತನ್ನ ಬಳಿ ಬಂದು ನಿಂತರೆ ದೇಹದಲ್ಲಾಗುವ ವಿದ್ಯುತ್ಸಂಚಾರವನ್ನು ನೆನೆದ. ಜೀವನದ ಅನುಭವಗಳಿಗಿಂತಲೂ ಕನಸುಗಳೇ ಹೆಚ್ಚು ಸುಖಕರ. ಇದನ್ನು ಸ್ವಾಮಿ ಅನುಭವದಿಂದ ಕಂಡುಕೊಂಡಿದ್ದ. ಅದಕ್ಕೇ ಸುಖವೆಂದು ತನ್ನ ಮುಂದೆ ಸುಳಿದುದನ್ನು ಬಿಡದೆ ಬಾಚಲು ಅವನು ಮನಸ್ಸು ಮಾಡಿದ್ದುದು. ಕನಸ್ಸಿನಲ್ಲಿಯೇ ಬೆಳೆದು ಕನಸೇ ಜೀವನದ ಮುಖ್ಯಾಧಾರವೆಂದು ಸ್ವಾಮಿ ದೃಢವಾಗಿ ನಂಬಿದ್ದ. ಆದರೆ ಅವನ ಕೆಲವು ಕನಸುಗಳು ರೂಪುಗೊಂಡು ಜೀವನದ ಕಾವ್ಯಾಲಹರಿಯನ್ನು ಬತ್ತಿಸಿ ಬಿಟ್ಟಿದ್ದವು ಕನಸುಗಳು ನಿಜವಾಗಬಾರದೇಕೆ? ಜಗುಲಿಯ ಮೇಲೆ ಹಿಟ್ಟಿನ ಮಡಕೆಯನ್ನು ನೋಡುತ್ತಾ ತಾನು ಅರಸುಗನಾಗಿದ್ದರೆ ಎಷ್ಟು ಚೆನ್ನಾಗಿರುತ್ತಿದ್ದಿತೆಂದು ಕನಸು ಕಾಣುವ ಭಿಕ್ಷುಕನೂ ಬಯಸುತ್ತಾನೆ. ಆ ಕನಸು ನಿಜವಾಗಿ ಪರಿಣಮಿಸಿ ಭಿಕ್ಷುಕ ಅರಸುಮಗನೇ ಆಗಿಬಿಟ್ಟರೆ, ಮುಂದೆ ಕನಸು ಕಾಣಲಾಗದ ಸಂಕಟಕ್ಕೆ ಅದು ಕನಸಾಗಿಯೇ ಉಳಿದದ್ದರೆ ಎಷ್ಟು ಚೆನ್ನಾಗಿರುತ್ತಿದ್ದಿತು ಎಂದು ವಿಷಾದ ಪಡುತ್ತಾನೆ. ಕನಸು ನಿಜವಾಗಲೆಂದು ಬಯಸುವವನು ಕೂಡ, ಕನಸು ಎಲ್ಲಿ ನಿಜವಾಗಿ ಬಿಡುವುದೋ ಎಂದು ಹೆದರಲೂ ಬೇಕಾಗುತ್ತದೆ, ಸ್ವಾಮಿಯ ಪಾಡೂ ಹಾಗೆಯೇ ಆಗಿತ್ತು. ಒಮ್ಮೊಮ್ಮೆ ಕನಸು ನಿಜವಾಗದೆ ಸುಳ್ಳಾದರೆ.... ಆನಂದವನವೆಂದು ನಾನು ಭಾವಿಸಿದುದು ಸಹರಾ ಮರುಭೂಮಿಯಾಗಿ ಮಾರ್ಪಟ್ಟರೆ....ಎಂದು ಯೋಚಿಸುವನು. ಮರುಕ್ಷಣವೇ ಜೀವನ ಜೀವನವೇ. ಅದನ್ನು ಕನಸು ಕರಗಿಸಲಾರದು; ಮಹೋನ್ನತವಾಗಿಯೂ ಮಾಡಲಾರದು. ಕನಸು ಮನಸಿನ ಮಾಯೆ. ಜೀವನ ಮನಸ್ಸಿನ ಘೋರ ಸಮಸ್ಯೆ. ಸಮಸ್ಯೆಯನ್ನು ಬಿಡಿಸಲಾರದ ಸಂಕಟಕ್ಕೆ ಮಾನವ ಮಾಯೆಯ ಮುಸುಕಿನಲ್ಲಿ ಮುಖ ಮುಚ್ಚಿಕೊಳ್ಳಲೆತ್ನಿಸುತ್ತಾನೆ ಎಂದುಕೊಂಡು ಎದ್ದ. ಹತ್ತು ಘಂಟೆ ಹೊಡೆಯಲಾರಂಭಿಸಿತು. ಕೋಟು ಟೋಪಿಯನ್ನು ಧರಿಸಿ 'ಊಟವಾದರೂ ಮಾಡಿ ಬರುವ' ಎಂದು ಮಾಡರ್ನ್ ಲಾಡ್ಜಿನ ಕಡೆಗೆ ಹೊರಟ.

*    *    *    *

ಎರಡು ತಿಂಗಳು ಕಳೆದವು. ಲಲಿತೆಯಿಂದ ತಪ್ಪದೆ ಕಾಗದಗಳು ಬರುತ್ತಿದ್ದವು. ಬಳಲಿ, ಬೇಸತ್ತು ಮನೆಗೆ ಬಂದಾಗ ಲಲಿತೆಯನ್ನು ಕಾಣದಿದ್ದರೂ

ಅವಳ ಕಾಗದಗಳನ್ನು ಕಂಡು—ಓದಿದವುಗಳನ್ನೇ ಮತ್ತೆ ಮತ್ತೆ ಓದಿ ಸಮಾಧಾನ ಹೊಂದುತ್ತಿದ್ದ. ಲಲಿತೆಯ ವಿರಹವೇದನೆಯನ್ನು ಮರೆಯಲು ಅತ್ಯಂತ ಆಸಕ್ತಿಯಿಂದ ಆಫೀಸಿನ ಕಡೆ ಗಮನವಿಟ್ಟಿದ್ದ. ಲಾಯರ ಶ್ರದ್ಧೆ ಹೆಚ್ಚಾದಷ್ಟೂ ಕಕ್ಷಿಗಾರರ ಭಕ್ತಿಯೂ ಹೆಚ್ಚಾಗುತ್ತಬಂತು....ಆದರೆ ಲಾಯರ ಸಂತೋಷ ಮಾತ್ರ ಬಳೆಯಲಿಲ್ಲ ನೀರಸವಾದ ಲಾಯರ್ ಹುದ್ದೆ ಸ್ವಾಮಿಯ ಜೀವನವನ್ನು ಮತ್ತಷ್ಟು ಅಸಹ್ಯಮಾಡಲು ಸಮರ್ಥವಾಯಿತೇ ವಿನಾ ಬೇರೆ ಯಾವ ಪ್ರಯೋಜನಕ್ಕೂ ಬರಲಿಲ್ಲ. ಗ್ರಾಮಾಫೋನ್ ಹಚ್ಚಿ ಹಾಡು ಕೇಳಲು ಕುಳಿತುಕೊಳ್ಳುವನು. ಅದು ಬೇಸರವಾಗಿ ರೇಡಿಯೋ ಪೆಟ್ಟಿಗೆಯನ್ನು ಶೃತಿ ಮಾಡುವನು. ಅದೂ ಬೇಸರವಾಗಿ ಯಾವದಾದರೂ ಪುಸ್ತಕವನ್ನು ತೆರೆಯುವನು. ಕಣ್ಣುಗಳು ಪಂಕ್ತಿಗಳ ಮೇಲೆ ಹರಿಯುತ್ತಿದ್ದರೂ ಮನಸ್ಸೆಲ್ಲೋ ಹಾರಾಡುತ್ತಿದ್ದಿತು. ಅದೂ ಬೇಸರವಾಗಿ ಪುಸ್ತಕವನ್ನು ಒಗೆದು ಹಾಸಿಗೆಯ ಮೇಲೆ ಬಿದ್ದುಕೊಂಡು 'ಹಾಳು ನಿದ್ದೆಯಾದರೂ ಬೇಗ ಬರಬಾರದೇ' ಎಂದು ಜಪಿಸುವನು. ಭಟ್ಟರು ಯಾವಾಗಲಾದರೂ ಮನಸ್ಸು ಮಾಡಿ ಒಮ್ಮೊಮ್ಮೆ ಮನೆಗೆ ಬಂದರೆ ಅದೂ ಇದೂ ಮಾತನಾಡಿಕೊಂಡು ಕಾಲ ಹಾಕುವನು. ಕೋರ್ಟಿನ ವ್ಯವಹಾರದಲ್ಲಿ ಆರಂಭವಾದ ಅವರ ಪರಿಚಯ ಕ್ರಮಕ್ರಮೇಣ ಬೆಳೆಯುತ್ತಾ ಬಂದಿತ್ತು. ಅವರ ಮಾತುಗಾರಿಕೆ, ಲೋಕಾನುಭವ ಸ್ವಾಮಿ ಕುತೂಹಲವನ್ನು ಕೆಣಕಿತ್ತು. ತಾನು ನಾಟ್ಯಕಲೆ ವಿಚಾರ ಮಾತನಾಡಲಿ—ಭಟ್ಟರದೊಂದು ಕೋಟಿ ಸಿದ್ಧ; ರಾಜಕೀಯ ವಿಚಾರವೆತ್ತಲಿ—ಭಟ್ಟರು ತಮ್ಮ ಅಭಿಪ್ರಾಯಗಳನ್ನು ನಿರ್ಭಯದಿಂದ ಹೇಳುತ್ತಿದ್ದರು; ಸಾಮಾಜಿಕ ಧಾರ್ಮಿಕ ವಿಷಯಗಳಿಗೆ ಬಂದರಂತೂ ಸ್ವಾಮಿಯ ಬಾಯಿ ಮುಚ್ಚಿಯೇ ಹೋಗುತ್ತಿತ್ತು. ಒಮ್ಮೊಮ್ಮೆ ತೀಕ್ಷ್ಣವಾದ ಆರಂಭವಾಗಿ ಬಿಟ್ಟರೆ ಹೊತ್ತು ಗೊತ್ತುಗಳೆರಡೂ ಹಾರಿಹೋಗುತ್ತಿದ್ದುವು.

ಭಟ್ಟರು ಕೇವಲ ಒಣಹರಟೆಯಲ್ಲಿಯೇ ತೃಪ್ತರಾಗಿರಲಿಲ್ಲ. ಅವರು ತಮ್ಮ ಸಂಕಲ್ಪವನ್ನು ನೆರವೇರಿಸಿಕೊಳ್ಳಲು ತಕ್ಕ ಸಮಯವನ್ನು ಕಾಯುತ್ತಿದ್ದರು. ತಮ್ಮ ಕೇಸಿನ ವಿಚಾರ ಸ್ವಾಮಿ ತೋರಿಸಿದ್ದ ಶುದ್ಧಾಭಕ್ತಿ ಭಟ್ಟರ ಮನಸ್ಸಿಗೆ ಬಂದಿತ್ತು. ಒಂದು ದಿವಸ ಏನೋ ಮಾತು ಮಾತಿಗೆ ಬಂದು ಸ್ವಾಮಿಯ ಬಾಯಲ್ಲಿ ತನ್ನ ಸ್ಥಿತಿಗತಿಯ ಇತಿವೃತ್ತ ಹೊರಟುಬಿಟ್ಟಿತು.

ಭಟ್ಟರು ಅದೇ ಸಮಯವೆಂದು

"ಹಾಗಾದರೆ ಇನ್ನು ಆರು ತಿಂಗಳು ಸಂಯಮ."

"ಊ! ಹಾಗೆಯೇ ಅನ್ನಬೇಕು ಭಟ್ಟರೇ-"

"ಮದುವೆ ಪ್ರಯತ್ನ ಏತಕ್ಕೆ ಮಾಡಬಾರದು. ನಿಮಗೇನು ಕಡಿಮೆ ಸ್ವಾಮಿ. ಇಂತಹ ಚಿಕ್ಕವಯಸ್ಸಿನಲ್ಲಿಯೇ ಹೀಗೆ ಹಟಯೋಗ ಆರಂಭಿಸಿ ಬಿಟ್ಟರೆ......."

"ನನ್ನ ಮದುವೆ ಆಗಿ ಹೋಗಿದೆಯಲ್ಲಾ ಭಟ್ಟರೇ."

"ಹಾಗೇನು? ನಾನು ಆ ಸಂಬಂಧ ಕೇವಲ ಕ್ಷಣಿಕವಾದದ್ದು ಎಂದಿದ್ದೆ."

"ಈ ವಿಚಾರ ನಿಮಗೆ ಅರ್ಥವಾಗುವುದಿಲ್ಲ ಭಟ್ಟರೇ, ಸುಮ್ಮನೆ ಇಲ್ಲದ್ದು ಕಟ್ಟಿಕೊಂಡು ವೃಥಾ ಏತಕ್ಕೆ ಪೇಚಾಟಕ್ಕೆ ಸಿಕ್ಕಿಕೊಳ್ಳುತ್ತೀರಿ."

"ನಿಜ, ನಿಜ ಸ್ವಾಮಿ. ನನಗೆ ಹೇಗೆ ಅರ್ಥವಾಗಬೇಕು. ಆದರೆ ನಾನು ನಿಮ್ಮ ಸ್ಥಾನದಲ್ಲಿದ್ದರೆ ಹೀಗೆ ಸುಮ್ಮನೆ ಕುಳಿತುಕೊಂಡು ಕಣ್ಣೀರಿನ ಕಾಲುವೆ ಹರಿಸುತ್ತಿರಲಿಲ್ಲ"

"ನೀವೇನು ಮಾಡುತ್ತಿದ್ದಿರಿ."

"ಷೋಕಾಗಿ ರಾಜನ ಹಾಗೆ ಇರುತ್ತಿದ್ದೆ. ಈಗ ತಾನೆ ಹೇಗಿದ್ದೀನಿ ನೋಡಿ. ನಿಮ್ಮ ವಯಸ್ಸು ನನಗೆ ಇರಬಾರದೇ ಅನಿಸುತ್ತದೆ."

ಈ ಯೋಚನೆ ಸ್ವಾಮಿಯ ಮನಸ್ಸಿನಲ್ಲಿಯೂ ಇತ್ತು. ಆದರೆ ಅದನ್ನು ಪ್ರಯತ್ನಪೂರ್ವಕವಾಗಿ ಮನಸ್ಸಿನಿಂದ ದೂರಮಾಡಿದ್ದ. ಈಗ ಭಟ್ಟರು ಮಾಡಿದ ಸೂಚನೆಯು ಸುಪ್ತಭಾವನೆಯನ್ನು ಜಾಗೃತಗೊಳಿಸಿದಂತಾಯಿತು. ಭಟ್ಟರು ಹೇಳಿದುದನ್ನು ಪರಿಹಾಸ್ಯಮಾಡುವಂತೆ

"ಸರಿಯಾದವರು ಸಿಕ್ಕುವುದಿಲ್ಲ ಭಟ್ಟರೇ. ಸುಮ್ಮನೆ ಲೇವಡಿಯಾಗುವ ಸಮಾಚಾರವೇ ನೀವು ಹೇಳುವುದು."

"ಪರಿಹಾಸ್ಯದ ಅರ್ಥ ಭಟ್ಟರಿಗೆ ಗೋಚರವಾಗದಿರಲಿಲ್ಲ. ಗೆಲುವಿನ ನಗೆಯನ್ನು ತೋರುತ್ತ

"ಪ್ರಯತ್ನ ನಡೆಸದೆಯೇ ಹೀಗೆ ತಾವು ಹೇಳಿದರೆ ನಾನೇನು ಅನ್ನಲಿ. ಒಳ್ಳೆಯ ಪದಾರ್ಥಗಳು ನಾವಿರುವ ಕಡೆಗೆ ಬರುವುದಿಲ್ಲ ನೋಡಿ; ಇವು ಇರುವ ಕಡೆಗೆ ನಾವು ಹೋಗಬೇಕು."

"ಹಾಗಾದರೆ ನಿಮ್ಮ ದೃಷ್ಟಿಯಲ್ಲಿ ಯಾರಿದ್ದಾರೆ ಹೇಳಿ."

"ತಾವು ಹಿಂದೆ ನನ್ನನ್ನು ಒಂದು ಪ್ರಶ್ನೆ ಕೇಳಿದ್ದೀರಿ. ಗಣೇಶರಾಯರ ಜತೆ ಗೆಜ್ಜೆಪೂಜೆ ಮಾಡಿಸಿಕೊಂಡ ಹುಡುಗಿ ಯಾರು ಎಂದು. ಜ್ಞಾಪಕ ವಿದೆಯೋ........"

"ಹು! ಹು! ಜ್ಞಾಪಕವಿದೆ. ಪ್ರಶ್ನೆಯೂ ಜ್ಞಾಪಕವಿದೆ, ಹುಡುಗಿಯೂ ಜ್ಞಾಪಕವಿದೆ. ಯಾರು, ಅವಳು ಯಾರು?"

"ಯಾರೋ ಒಬ್ಬಳು. ನಮ್ಮ ಚಂದ್ರಮ್ಮನ ಸಾಕು ಮಗಳು. ಈಗ ಸದ್ಯಕ್ಕೆ ಏನೂ ಅಡ್ಡಿ ಆತಂಕವಿಲ್ಲ. ತಾವು ಒಪ್ಪುವುದಾದರೆ ಮುಂದಿನ ನಿಷ್ಕರ್ಷೆ ಏನೂ ತೊಂದರೆಯಾಗಲಾರದು."

ಸ್ವಾಮಿಯ ಆನಂದ ಉಕ್ಕೇರಿತು. ಭಟ್ಟರ ವಿಚಾರದಲ್ಲಿ ನೂರ್ಮಡಿ ಯಾದ ವಿಶ್ವಾಸ ಒಮ್ಮೆಲೇ ವೃದ್ಧಿಯಾಯಿತು, ಭಟ್ಟರ ಕೈಗಳನ್ನು ಹಿಡಿದು

"ನಿಮ್ಮ ಉಪಕಾರ ಚಿರಸ್ಮರಣೀಯ ಭಟ್ಟರೇ. ಎಂದು?"

"ನಾಳೆ. ಬೆಳಿಗ್ಗೆ ನಾನು ಎಲ್ಲಾ ವ್ಯವಸ್ಥೆ ಮಾಡುತ್ತೇನೆ. ಸಂಜೆಗೆ ನಾನೇ ಬಂದು ಕರೆದುಕೊಂಡು ಹೋಗುತ್ತೇನೆ."

"ಹಾಗಾದರೆ ಇದು ಇರಲಿ ಹತ್ತಿರ"

ಎಂದು ಐವತ್ತು ರೂಪಾಯಿಗಳ ನೋಟೊಂದನ್ನು ಭಟ್ಟರ ಕೈಗಿತ್ತ. ಭಟ್ಟರು 'ಬೇಡಬೇಡ'ವೆಂದು ಸಂಕೋಚಪಟ್ಟುಕೊಳ್ಳುತ್ತಾ ಅದನ್ನು ಸೊಂಟಕ್ಕೆ ಸೇರಿಸಿದರು.

"ಮುಖ್ಯ—ನಿಮ್ಮ ಸಂತೋಷ" ಎಂದು ಭಟ್ಟರು ಬೀಳ್ಕೊಂಡರು. ಸ್ವಾಮಿ ಕುಣಿಯುತ್ತ ಹಾಸಿಗೆಯ ಮೇಲೆ ಉರುಳಿದ. ಕಿಟಕಿಯಾಚೆ ಯಾರೋ ನಿಂತು ಅವನನ್ನೇ ದುರುಗುಟ್ಟಿಕೊಂಡು ನೋಡುತ್ತಿದ್ದಂತೆ ಬೆಚ್ಚು ಬಿದ್ದು, ಕಿಟಕಿಯ ಬಳಿ ಹೋಗಿ ನೋಡಿ ಯಾರೂ ಕಾಣಬರದಿರಲು, ಅದರ ಬಾಗಿಲು ಹಾಕಿ ಬಂದು ಮಲಗಿದ. ಅಂದಿನಂತಹ ನಿದ್ದೆಯನ್ನು ಕಂಡು ಎರಡು ತಿಂಗಳಾಗಿತ್ತು.

* * * *

ಸುಂದರಿ ಅಂದವಾಗಿ ಅಲಂಕೃತಳಾಗಿ ಎದುರಿಗಿದ್ದ ನಿಲುಗನ್ನಡಿಯಲ್ಲಿ ಮುಂದಲೆಯನ್ನು ತಿದ್ದಿಕೊಳ್ಳುತ್ತಾ ನಿಂತಿದ್ದಳು. ನಕ್ಷತ್ರದ ಹಾಗೆ ಕಾಣುತ್ತಿದ್ದ ಚುಕ್ಕೆಗಳಿಂದ ಕೂಡಿದ ಕರಿಯರೇಶಿಮೆಯ ಸೀರೆಯ ಮೇಲೆ ಅವಳು ತೊಟ್ಟಿದ್ದ ಅರ್ಧತೋಳಿನ ರಕ್ತನೀಲವರ್ಣದ ಕುಪ್ಪಸ ಅವಳ ಮುದ್ದಾದ ದೇಹವನ್ನು ಒಪ್ಪುತ್ತಿತ್ತು. ದೇಹದ ಮಾಟಕ್ಕೆ ಯಾವ ಕುಂದು ಬರದಿದ್ದರೂ ಮುಖದ ಮೇಲೆ ಕಷ್ಟಜೀವನದ ಕುರುಹುಗಳು ತಲೆಹಾಕಿದ್ದವು. ಕೆನ್ನೆಯ ಮೇಲಿನ ಕೆಂಪು ಹಳದಿಗೆ ಎಡೆಕೊಟ್ಟಿತ್ತು; ತುಟಿಯ ಕೆಂಪು ಕಪ್ಪು ಬಣ್ಣಕ್ಕೆ ದಾರಿಮಾಡಿಕೊಡುತ್ತಲಿತ್ತು; ಕಂಗಳ ಸುತ್ತಲೂ ಕಪ್ಪು ಬಣ್ಣದ ಗುಣಿ ಕಾಣಿಸಿಕೊಂಡಿತ್ತು. ಮುಖಕ್ಕೆ ಬಣ್ಣಬಣ್ಣಗಳ ಪುಡಿಯನ್ನೆರಚಿಕೊಂಡು ತನ್ನ ಗತವೈಭವದ ಸ್ಮಾರಕವನ್ನು ಮುಖದ ಮೇಲೆ ಕಟ್ಟಲು ಪ್ರಯತ್ನಿಸಿದ್ದಳು. ಸ್ವಲ್ಪ ಹೊತ್ತು ಹಾಗೆಯೇ ಕನ್ನಡಿಯ ಮುಂದೆ ನಿಂತಿದ್ದು ಸಾವಕಾಶವಾಗಿ ಬಂದು ಮಂಚವನ್ನೇರಿ ಸುತ್ತಲೂ ಗೋಡೆಗಳ ಮೇಲೆ ರಂಜಿಸುತ್ತಿದ್ದ ಚಿತ್ರಗಳನ್ನು ನೋಡುತ್ತ ಕುಳಿತಳು. ಒಂದು ಸಾಲೆಲ್ಲಾ ರವಿವರ್ಮನ ವಾರಿಣಿ, ಮಾನಿನಿ, ತಿಲೋತ್ತಮಾ, ಮಲೆಯಾಳ ಸುಂದರಿಯರ ಚಿತ್ರಗಳು, ಇನ್ನೊಂದು ಸಾಲೆಲ್ಲಾ ಇಂಗ್ಲಿಷ್ ಕ್ಯಾಲೆಂಡರುಗಳಲ್ಲಿ ಪ್ರಕಟವಾದ ನಗ್ನ ಚಿತ್ರಗಳು. ಆ ಚಿತ್ರಗಳನ್ನು ನೋಡುತ್ತಾ "ಈ ರೀತಿಯಲ್ಲಿ ಚಿತ್ರಕ್ಕೆ ನಿಲ್ಲಲ್ಲು ಹೆಂಗಸರಾದರೂ ಹೇಗೆ ಒಪ್ಪಿದರು" ಎಂದು ಪ್ರಶ್ನಿಸಿಕೊಂಡು "ಹಲವರೊಂದಿಗಿರಲು ನಾನು ಹೇಗೆ ಒಪ್ಪಿದೆನೋ ಹಾಗೆಯೇ" ಎಂದು ಉತ್ತರ ಹೇಳಿಕೊಂಡು ದುಃಖದಿಂದ ಮುಖವನ್ನುಮುಚ್ಚಿ ಕುಳಿತಳು. ಸ್ವಲ್ಪಕಾಲಾನಂತರ ಯಾರೋ ಬಂದತಾಗಲು ಎದ್ದು ನಿಂತಳು.

ಸ್ವಾಮಿಯನ್ನು ಕಂಡೊಡನೆಯೇ ಸುಂದರಿಯ ಎದೆ ಬಡಿದುಕೊಳ್ಳಲಾರಂಭಿಸಿತು. ಸ್ವಾಮಿ ತನ್ನ ಉದ್ವೇಗವನ್ನು ಮುಚ್ಚಿಕೊಳ್ಳಲು ಎಷ್ಟು ಯತ್ನಿಸಿದರೂ ಅದು ಅವನ ವಶಕ್ಕೆ ಬರದಾಯಿತು. ಬಾಗಿಲನ್ನು ಮುಂದಕ್ಕೆ ಮಾಡಿ ಮುಂದೆ ಬಂದು ಸುಂದರಿಯ ಕೈಹಿಡಿದು ಮಂಚದ ಮೇಲೆ ಕೂರಿಸಿಕೊಂಡು

"ಸುಂದರಾ......ಸುಂದರಾ......ಸುಂದರಿ........ಎಂತಹ ಸುಂದರವಾದ ಹೆಸರು"

"ಹೌದು, ಹೆಸರು ಸುಂದರವಾಗಿದೆ ನಿಜ"

"ಹೆಸರು ಮಾತ್ರವೇತಕ್ಕೆ ನೀನೂ ಸುಂದರವಾಗಿಯೇ ಇದ್ದೀಯೆ. ಸುಂದರಿಗೆ ತಕ್ಕ ಹೆಸರು ಸುಂದರಾ."

"ಎಲ್ಲರೂ ಒಂದೇರೀತಿ ಮಾತನಾಡುತ್ತೀರಲ್ಲಾ"

"ಹಾಗೆಂದರೆ."

"ಹಾಗೆಂದರೆ ನನ್ನ ಬಳಿಗೆ ಬರುವವರೆಲ್ಲರೂ ಒಂದೇ ರೀತಿಯಲ್ಲಿ.... ನಿಮ್ಮಹಾಗೆ........ನನ್ನ ರೂಪವರ್ಣನೆಯಿಂದಲೇ ಆರಂಭಿಸುವರು. ನೀವು ಬೇರೆಯೇನಾದರೂ ಹೇಳಬಾರದೇ?"

"ಏನು ಹೇಳಲಿ ಚಿನ್ನಾ. ನಿನ್ನ ರೂಪ ನನ್ನನ್ನು ನಿಜವಾಗಿಯೂ ಮರಳುಮಾಡಿತು....ಹಾಗೆಯೇ ನಿನ್ನ ಪ್ರೇಮವೂ........"

"ಮತ್ತೆ ಎಲ್ಲರ ಹಾಗೆಯೇ ಆರಂಭಿಸಿಬಿಟ್ಟಿರಲ್ಲಾ. ಇಂತಹ ವಿಶಾಲ ಪ್ರಪಂಚದಲ್ಲಿದ್ದು ಬಂದು ಬೇರೇ ಏನೂ ತೋರದೇನು?"

"ನಿಜ. ತೋರದು. ಸೂರ್ಯನ ಮುಂದೆ ಮಿಂಚುಹುಳು ಬೆಳಗದಂತೆ ನನ್ನ ವಿದ್ಯೆ, ಅನುಭವ, ಜ್ಞಾನವೆಲ್ಲವೂ ನಿನ್ನ ಮುಂದೆ....ನಿನ್ನರೂಪದ ಮುಂದೆ ನಿಷ್ಪ್ರಯೋಜಕ."

"ನನ್ನನ್ನೇತಕ್ಕೆ ಸುಮ್ಮನೆ ಹೊಗಳುವಿರಿ. ಹೊಗಳಿಕೆಯನ್ನು ಕೇಳಿ ಕೇಳಿ ನನ್ನ ಬಾಳು ಸುಳ್ಳಿನ ಒಂದು ಮುದ್ದೆಯಾಗಿ ಪರಿಣಮಿಸಿದೆ. ನಿಮ್ಮನ್ನು ನೋಡಿದರೆ....ಈ ಕಣ್ಣುಗಳಲ್ಲಿ ಅಪಾರ ಯಾತನೆ ಕಾಣಬರುತ್ತದೆ."

"ಹೌದು ಯಾತನೆಯಾರಿಗಿಲ್ಲ. ನಿನ್ನ ಜೀವನವೇನು ಸುಖ ಜೀವನವೇ?"

"ಇಲ್ಲ ಸರಿಯೆ. ಆದರೆ ಯಾತನೆಯನ್ನು ನಾವು ಮರೆಯಬೇಕು. ಯಾವಾಗಲೂ ಹಸನ್ಮುಖಿಗಳಾಗಿರಬೇಕು.....ಇರುತ್ತೇವೆ.....ಹಾಗೆ ಇದ್ದೂ ಇದ್ದೂ ನಮ್ಮ ದುಃಖವನ್ನು ಮರೆತು ಬಿಡುತ್ತೇವೆ."

"ಇಲ್ಲ. ಆ ಮಾತನ್ನು ನಾನು ನಂಬುವುದಿಲ್ಲ. ನಿನ್ನ ಯಾತನೆಯನ್ನಂತೂ ನೀನು ಮರೆತಿಲ್ಲ. ಅದನ್ನು ಹುದುಗಿಸಿ ಹುದುಗಿಸಿ ಕಣ್ಣುಗಳಲ್ಲಿ ಸೂಚಿಸುತ್ತಿರುವೆ. ನನ್ನ ಯಾತನೆಯನ್ನು ಮರೆಯಲು ಇಲ್ಲಿ ಬಂದಂತೆಯೇ ನೀನು ಏತಕ್ಕೆ ಮರೆಯಬಾರದು."

" ನಾನು ಮರೆಯುವ ಮಾತು ಹಾಗಿರಲಿ. ನೀವಾದರೂ ಮರೆಯಿರಿ. ತೆಗೆದುಕೊಳ್ಳಿ ಈ ದೇಹ ನಿಮ್ಮದು. ಇದನ್ನು ಮನಸ್ಸು ಬಂದ ಹಾಗೆ ಉಪಯೋಗಿಸಿಕೊಳ್ಳಲು ನಿಮಗೆ ಅಧಿಕಾರವಿದೆ."

" ಅದು ಸುಳ್ಳು ಮಾತು. ಯಾರ ಮೇಲೆ ಯಾರಿಗೂ ಅಧಿಕಾರವಿಲ್ಲ. ಇದ್ದರೆ ಒಂದೇ ಅಧಿಕಾರ....ಪ್ರೇಮದ ಅಧಿಕಾರ"

" ಅದೇ ಇದೆಯೆಂದು ತಿಳಿದುಕೊಳ್ಳಿ."

" ಸುಂದರಾ ! ನಿಜವಾಗಿಯೂ ಈ ಮಾತು ನಿನ್ನ ಅಂತಃಕರಣದಿಂದ ಬಂತೇ ? ನಿಜವಾಗಿಯೂ ನನಗೆ ನಿನ್ನ ಮೇಲೆ ಪ್ರೇಮದ ಅಧಿಕಾರವಿದೆಯೇ? "

" ನಾನು ಹೇಗೆ ಹೇಳಲಿ ರಾಯರೇ. ಸೂಳೆಗೆ ಪ್ರೇಮವೆಂದರೇನು ಗೊತ್ತು....ಹೋಗಲಿ ನಾಲ್ಕು ಕೀರ್ತನೆ ಹಾಡಲೇ."

" ಬೇಡ. ನಿನಗೇತಕ್ಕೆ ಶ್ರಮ"

ಎಂದು ಕತ್ತು ತಗ್ಗಿಸಿ ಕುಳಿತ. ಸುಂದರಿಯ ಒಂದೊಂದು ಮಾತು ಶೂಲದ ಮೊನೆಯಂತೆ ಸ್ವಾಮಿಯ ಹೃದಯವನ್ನು ಇರಿದಿದ್ದವು. ಸುಂದರಿ ಅದನ್ನು ಕಂಡುಕೊಂಡು

" ಕ್ಷಮಿಸಬೇಕು. ಏನೇನೋ ಮಾತಾಡಿಬಿಟ್ಟೆ. ಒಲಿದು ಬಂದವರನ್ನು ನೋಯಿಸಿದೆ."

" ಸತ್ಯವನ್ನು ನೀನಾಡಿದರೆ ಅದು ನನ್ನನ್ನೇತಕ್ಕೆ ನೋಯಿಸಬೇಕು."

"ನೋವನ್ನುಂಟುಮಾಡಿದರೂ ಸತ್ಯವನ್ನೇ ನೀವು ಮೆಚ್ಚುವಿರೇನು?"

" ಮೊದಲು ಮೆಚ್ಚುತ್ತಿರಲಿಲ್ಲ. ಈಗ....ನಿನ್ನ ಮಾತುಗಳು ಕಿವಿಗೆ ಬಿದ್ದಾರಭ್ಯ ಮೆಚ್ಚಲಾರಂಭಿಸಿರುವೆನು."

" ಎಂತಹ ಮಹಾನುಭಾವರು ನೀವು."

" ಏಕೆ ಸುಂದರಾ."

" ನನ್ನ ಬಾಳಿನಲ್ಲಿಯೂ ಮರುಕ ತೋರುವಿರಲ್ಲಾ. ನನ್ನನ್ನೂ ಒಂದು ಮನುಷ್ಯ ಪ್ರಾಣಿಯೆಂದು ತಿಳಿದು ಸಹನೆಯಿಂದ ಕಾಣುವಿರಲ್ಲಾ. ....." ನಿಮ್ಮನ್ನು ನೋಯಿಸಿದರೂ ನನ್ನನ್ನು ಪ್ರೀತಿಸುವಿರಲ್ಲಾ ......."

" ನೀನೊಬ್ಬಳು ಕೆಸರಿನ ಕಮಲದ ಹಾಗಿದ್ದೀ ಸುಂದರಾ. ಹಿಂದೆ

ಯಾವದೋ ಸಾಮ್ರಾಜ್ಯದ ಲಕ್ಷ್ಮಿಯಾಗಿರಬೇಕು ನೀನು....ಶಾಪಗ್ರಸ್ತಳಾಗಿ ಮುಹಾನಂದೆಯಂತೆ ಈಗ ಹುಟ್ಟಿರಬೇಕು."

"ನೀವು ಕವಿಗಳಾಗಿದ್ದೀರಿ. ಅದಕ್ಕೇ ಹೀಗೆ ಮಾತನಾಡುವಿರಿ."

ರಾಮಕ್ಕ ಮೆಲ್ಲನೆ ತನ್ನ ಜೋಗುಳವನ್ನು ಆರಂಭಿಸಿದುದು ಕೇಳ ಬಂತು. ಸ್ವಾಮಿ ಕಿವಿಗಳನ್ನು ನೆಟ್ಟಗೆ ಮಾಡಿ ಆಲಿಸುತ್ತಾ

"ಇಲ್ಲಿ ಸಣ್ಣ ಮಕ್ಕಳಿವೆಯೇನು. ನಿನಗೆ ಮಕ್ಕಳು...."

"ನನಗೆ ಮಕ್ಕಳಿಲ್ಲ. ಇಲ್ಲಿಯಾರೂ ಮಕ್ಕಳಿಲ್ಲ. ಏತಕ್ಕೆ ಹಾಗೆ ಕೇಳುವಿರಿ."

"ಮಕ್ಕಳಿಲ್ಲದಿದ್ದರೆ ಜೋಗುಳ ಹೇಳುವುದೇತಕ್ಕೆ."

"ಅದು ನಮ್ಮಜ್ಜಿಯ ಹುಚ್ಚು, ಅವಳಿಗೆ ಅದರ ಮೇಲೆ ತುಂಬಾ ಪ್ರೀತಿ. ಯಾವಾಗಲೂ ಕುರುಕುತ್ತಲೇ ಇರುತ್ತಾಳೆ."

"ಹಾಗೋ. ಸರಿ."

ಬಾಗಿಲು ತಟ್ಟಿದ ಶಬ್ದ ಕೇಳ ಬಂತು. ಸುಂದರ ಹೋಗಿ ಬಾಗಿಲು ತೆಗೆಯಲು ರಾಮಕ್ಕ ಒಂದು ಕೈಯಲ್ಲಿ ತಾಂಬೂಲವನ್ನೂ, ಒಂದು ಕೈಯಲ್ಲಿ ಹಾಲಿನ ಚೆಂಬನ್ನೂ ಹಿಡಿದು ಒಳಕ್ಕೆ ಬಂದು

"ಏನು ತಾಯಿ. ಹಾಲು ಮರೆತು ಬಂದೆ. ಚಂದ್ರಕ್ಕ ಕಳುಹಿಸಿ ಕೊಟ್ಟಳು."

ಎಂದು ಮೇಜಿನ ಮೇಲೆ ಅವುಗಳನ್ನಿಟ್ಟು ಹೊರಡುವುದರಲ್ಲಿದ್ದಳು. ಸ್ವಾಮಿ ರಾಮಕ್ಕನನ್ನು ದಿಟ್ಟಿಸಿನೋಡುತ್ತಾ

"ನಿನ್ನ ಅಜ್ಜಿ ಇವಳೇಯೇ ಸುಂದರಾ."

"ಹೌದು. ಏತಕ್ಕೆ ಹಾಗೆ ಕೇಳುವಿರಿ."

"ಏತಕ್ಕೂ ಇಲ್ಲ. ಈಕೆಯನ್ನು ಹಿಂದೆ ಎಲ್ಲಿಯೋ ನೋಡಿದ ಹಾಗಿದೆ. ಅದಕ್ಕೋಸ್ಕರ ಕೇಳಿದೆ........ನಿನ್ನ ಹೆಸರೇನವ್ವಾ."

ರಾಮಕ್ಕ ಮಾರುತ್ತರ ಕೊಡದೆ ಸ್ವಾಮಿಯ ಸಮೀಪಕ್ಕೆ ಬಂದು ಕ್ಷಣ ಕಾಲ ಅವನನ್ನೇ ನೋಡಿ

"ಯಾಕಪ್ಪ."

"ಏತಕ್ಕೂ ಇಲ್ಲ. ಸುಮ್ಮನೆ ಕೇಳಿದೆ ಅಷ್ಟೆ."

" ನನ್ನ ಹೆಸರು ರಾಮಕ್ಕಾಂತ....ಅದರಿಂದ ನಿನಗೇನಾಯಿತಪ್ಪಾ ? "

ಸ್ವಾಮಿ ಚಕಿತನಾದ. ರಾಮಕ್ಕನ ಬಳಿಗೆದ್ದು ಬಂದು ಆಕೆಯ ಮುಖವನ್ನು ಎರಡು ಕೈಗಳಲ್ಲಿಯೂ ಹಿಡಿದು

" ವೆಂಕಟರಾಯರ ಮನೆಯಲ್ಲಿ ಕೆಲಸಕ್ಕಿದ್ದ ರಾಮಕ್ಕನೇ ? "

" ಹೌದು....ನೀನು ಯಾರಪ್ಪಾ. ಎಲ್ಲಾ ಹೇಳುತ್ತೀ. "

ಸ್ವಾಮಿ ರಾಮಕ್ಕನನ್ನು ಭರದಿಂದ ಅಪ್ಪಿದ. ಕಂಬನಿಯ ಪ್ರವಾಹ ಮುದುಕಿಯ ಹೆಗಲನ್ನು ಚೆನ್ನಾಗಿ ತೋಯಿಸಿತು.

" ನನ್ನ ಮರೆತೆಯಾ ರಾಮಕ್ಕಾ. ನಾನು....ರಂಗಸ್ವಾಮಿ. "

ರಾಮಕ್ಕ ಒಮ್ಮೆಮಾತ್ರ ಕತ್ತೆತ್ತಿ ನೋಡಿ ನಿಶ್ಚೇತನಳಾಗಿ ಬಿದ್ದುಬಿಟ್ಟಳು. ಸುಂದರಿ ಭೀತಿಯಿಂದ ಓಡಿ ಹೋಗಿ ಒಂದು ಪಾತ್ರೆಯಲ್ಲಿ ನೀರು ತಂದಳು. ಅವಳ ಹಿಂದ ಚಂದ್ರಮ್ಮ, ಪುಟ್ಟು, ಭಟ್ಟರು ಎಲ್ಲರೂ ಓಡಿ ಬಂದರು. ಸ್ವಲ್ಪ ಉಪಚರಿಸಿದಮೇಲೆ ರಾಮಕ್ಕ ಕಣ್ಣುತೆರೆದು ನೋಡಿ ದೀರ್ಘಸ್ವರದಲ್ಲಿ ಅಳಲಾರಂಭಿಸಿ

" ಸುಂದರಾ........ನಮ್ಮ ರಂಗಸ್ವಾಮಿ ಕಣೇತಾಯಿ ; ಪುಟ್ಟೂ........ ನಿಮ್ಮಣ್ಣ ಕಣಪ್ಪಾ... .... "

" ಇವಳು....ನಮ್ಮ ಸುಂದರೂನೆ....ಪುಟ್ಟೂನೆ.... "

ಎಂದು ಸುಂದರನನ್ನಪ್ಪಿದ. ಪುಟ್ಟು ಅಣ್ಣನ ಬಳಿ ಬಂದು ನಿಂತ. ಚಂದ್ರಮ್ಮ ಈ ನೋಟವನ್ನು ನೋಡಿ ವಿಸ್ಮಿತಳಾಗಿ ಕಂಬದಂತೆ ನಿಂತು ಬಿಟ್ಟಳು. ಭಟ್ಟರ ಬಾಯಲ್ಲಂತೂ ಮಾತೇ ಹೊರಡದಾಯಿತು. ರಾಮಕ್ಕ ಸಮಾಧಾನ ತಂದುಕೊಂಡು ಸ್ವಾಮಿಯನ್ನು ನೇವರಿಸುತ್ತಾ

" ಇಷ್ಟುದಿನ ಎಲ್ಲಿಗೆ ಹೋಗಿದ್ದೆ ಕಂದಾ. ನಮ್ಮನೆಲ್ಲಾ ಕಾಡುಪಾಲು ಮಾಡಿ. "

" ನಾನು ಮಹಾಪಾಪಿ ರಾಮಕ್ಕಾ. ಮಹಾನೀಚ. ಇದೇ ಊರಿನಲ್ಲಿದ್ದು ನಿಮ್ಮನ್ನು ಇಳ್ಳಿಗಿಳಿಸಿದೆ. "

" ಯಾರದೇನು ತಪ್ಪು ಬಿಡು ರಂಗೂ. ಅವತ್ತು ಚಿಕ್ಕಮ್ಮನ ಕೈಲಿ ವ್ಯಾಜ್ಯಕಾದುಕೊಂಡು ಹೋದವನು ಎಲ್ಲಿಗೆ ಹೋದೆಯಪ್ಪಾ. "

" ಅದು ದೊಡ್ಡಕಥೆ ರಾಮಕ್ಕಾ. ಅಲ್ಲಿ ಇಲ್ಲಿ ಪೋಲಿ ಅಲೆದು

ಕೊಂಡು ಬೊಂಬಾಯಿ ಸೇರಿದೆ. ಅಲ್ಲಿ ಒಬ್ಬ ಗುಜರಾತಿ ಸಾಹುಕಾರನ ಮನೆಯಲ್ಲಿ ಒಂದು ಪಾಠ ಸಿಕ್ಕಿತು. ಅದರ ಸಹಾಯದಿಂದ ಬಿ. ಎ. ಪಾಸುಮಾಡಿಕೊಂಡು ಅಲ್ಲೇ ಲಾ ಪರೀಕ್ಷೆಕೊಟ್ಟು ಊರಿಗೆ ಹಿಂದಿರುಗಿ ಬಂದೆ.... ''

" ಬಂದವನು ಮನೆ ವಿಚಾರ ಕೇಳಲೇ ಬೇಡವೇ ರಂಗಣ್ಣಾ. "

" ಕೇಳಿದೆ ರಾಮಕ್ಕಾ. ನಮ್ಮ ಮನೇಲಿ ಯಾರೋ ಇದ್ದರು. ಅವರು ನಾನು ಹೋದ ಮೇಲೆ ಆದದ್ದನ್ನೆಲ್ಲಾ ಹೇಳಿ ನೀನೂ, ಸುಂದರೂ, ಪುಟ್ಟೂ ಎಲ್ಲೀಗೆ ಹೋದರೋ ಗೊತ್ತಿಲ್ಲಾ ಎಂದು ಹೇಳಿದರು. ಹುಡುಕೋ ಅಷ್ಟು ಹುಡುಕಿ ಕೊನೆಗೆ ದಿಕ್ಕುತೋರದೆ ಸುಮ್ಮನಾದೆ. ಅಂತೂ ಎಲ್ಲಾರನ್ನೂ ಕಾಡುಪಾಲು ಮಾಡಿದ ಪಾಪಿ ನಾನು. "

" ಯಾಕೆ ಯೋಚಿಸುತ್ತೀ ರಂಗೂ ಸುಮ್ಮನಿರು. ಹಣೆಯಲ್ಲಿ ಬರೆದದ್ದಕ್ಕೆ ಯಾರೇನು ಮಾಡುವುದಕ್ಕಾಗುತ್ತದೆ. ಆದರೆ ಇಷ್ಟುದಿನ ಅನ್ನ ಬಟ್ಟೆ ಕೊಟ್ಟಾಯಿತು ಅವಳು ಚಂದ್ರಮ್ಮ........ಅವಳನ್ನು ಎಷ್ಟುಕೊಂಡಾಡಿದರೂ ಸಾಲದು. "

ಸ್ವಾಮಿ ಎದ್ದು ಚಂದ್ರಮ್ಮನ ಕಡೆ ಕೃತಜ್ಞತೆಯಿಂದ ನೋಡಿದ. ಚಂದ್ರಮ್ಮ ಆನಂದವನ್ನು ತಡೆಯಲಾರದೆ ಅವನನ್ನು ಬಿಗಿದಪ್ಪಿದಳು. ಸ್ವಾಮಿ ದೈನ್ಯದಿಂದ

" ಚಂದ್ರಾತಾಯೀ. ನಿನ್ನುಪಕಾರಕ್ಕೆ ನಾನು ಋಣಿ. ಆದರೆ ಇನ್ನು ಮೇಲೆ ನನ್ನ ತಂಗಿ, ತಮ್ಮ, ಅಜ್ಜಿಯರನ್ನು ಜೊತೆಯಲ್ಲಿ ಕಳುಹಿಸಬೇಕು. ಇಷ್ಟೇ ನಾನು ಕೇಳಿಕೊಳ್ಳುವುದು. ನೀನು ಜೀವಂತಳಾಗಿರುವ ತನಕ ಸಂಸಾರ ನಾನು ನೋಡಿಕೊಳ್ಳುತ್ತೇನೆ. "

" ಅದೇನು ಯೋಚನೆ ಬೇಡಿ ರಾಯರೇ, ಸುಂದರನದು ೨೦—೩೦ ಸಾವಿರ ರೂಪಾಯಿ ಆಸ್ತಿಯಿದೆ. ಅವಳು ಯಾವಾಗ ಬೇಕಾದರೂ ಅದನ್ನು..."

ಎಂದು ಹೇಳುತ್ತಿರುವಂತೆಯೇ ಗಂಟಲು ಕಟ್ಟಿ ಬಂದಿತು. ಸುಂದರ ಚಂದ್ರಮ್ಮನನ್ನು ತಬ್ಬಿಕೊಂಡು ತಾಯನ್ನಗಲುವ ಕರುವಿನಂತೆ ಗೋಳಿಟ್ಟಳು. ಭಟ್ಟರು ಎಲ್ಲರನ್ನೂ ಸಂತೈಸಿ, ಸ್ವಾಮಿ ಆ ರಾತ್ರಿಯನ್ನು ಅಲ್ಲಿಯೇ ಕಳೆಯಬೇಕೆಂದೂ, ತನಗೆ ಬೇಕಾದಾಗ ರಾಮಕ್ಕ, ಪುಟ್ಟು, ಸುಂದರನನ್ನು ಕರೆದೊಯ್ಯಬಹುದೆಂದು ಹೇಳಿ ಸ್ವಾಮಿಗೆ ಹಾಸಿಗೆ ಹೊಂದಿಸಲು

ಹೋದರು. ಒಬ್ಬರ ಮುಖವನ್ನೊಬ್ಬರು ಕದ್ದು ಕದ್ದು ನೋಡುತ್ತಾ ಹೃದಯ ವನ್ನು ಒಡೆದುಕೊಂಡು ಬರುತ್ತಿದ್ದ ಆನಂದವನ್ನು ಸೂಚಿಸಲಾರದೆ ಸುಮ್ಮ ನಿದ್ದರು. ಭಟ್ಟರು ಪಾಸಿಗೆ ಸಿದ್ಧವಾಗಿದೆಯೆಂದು ಬಂದು ಹೇಳಿ ದೊಡ್ಡ ಸಮಸ್ಯೆಯನ್ನು ಪರಿಹರಿಸಿದರು.

*   *   *   *   *   *   *

ಸ್ವಾಮಿಯ ಮನೆಗೆ ಜೀವಕಳೆ ಬಂದಂತಾಯಿತು. ಸುಂದರನ ಪ್ರಭೆ ಮನೆಯನ್ನು ಬೆಳಗತೊಡಗಿತು. ವ್ಯಾಸಂಗದಲ್ಲಿ ಪುಟ್ಟು ತೋರಿಸು ತ್ತಿದ್ದ ಆಸಕ್ತಿ ಸ್ವಾಮಿಯ ಮನಸ್ಸಿನ ದೊಡ್ಡ ಹೊರೆಯನ್ನು ಇಳುಹಿ ಸಿತ್ತು. ರಾಮಕ್ಕನ ಉತ್ಸಾಹ ಅವಳಿಗೆ ಎಳೆಯ ಪ್ರಾಯವನ್ನು ಸಂಪಾದಿಸಿ ಕೊಟ್ಟಿತು. ಸ್ವಾಮಿಯು ಸಮಯ ನೋಡಿ ಅಜ್ಜಿ, ತಂಗಿ, ತಮ್ಮನಿಗೆ ತನ್ನ ಲಲಿತೆಯ ಸಂಬಂಧವನ್ನು ತಿಳಿಸಿಬಿಟ್ಟ. ಎಲ್ಲರೂ ಏಕಕಂಠರಾಗಿ ರಾಮಕೃಷ್ಣಯ್ಯ ನಿಗೆ ಬೇರೆ ಮದುವೆ ಮಾಡಿ ಅತ್ತಿಗೆಯನ್ನು ಮೂರು ತಿಂಗಳು ತುಂಬಿದ ಕೂಡಲೆ ಕರೆಸಿಕೊಂಡು ಬಿಡಬೇಕೆಂದು ನಿಶ್ಚಯಿಸಿದರು. ಆದರೆ ಸುಂದರನ ಭವಿಷ್ಯ ನಿಶ್ಚಯವಾಗಲಿಲ್ಲ. ಒಂದು ದಿನ ಸ್ವಾಮಿ ತಂಗಿಯನ್ನು ಕುರಿತು

"ರಾಮಕೃಷ್ಣಯ್ಯನ ಮದುವೆಯೊಂದೇ ಆಗಬೇಕೇ ಸುಂದರೂ."

"ಏತಕ್ಕೆ ಅಣ್ಣಯ್ಯ"

"ಅದರ ಜತೆ ನಿನ್ನದೂ ಆಗಿ ಹೋದರೆ ಚೆನ್ನೆಂದು ನನಗೆ ಅನ್ನಿಸಿತು."

"ಏನು. ಆಗಲೇ ತಂಗಿಯನ್ನು ಮನೆಯಿಂದ ಹೊರಗೆ ಹಾಕ ಬೇಕೆಂದು ಪ್ರಯತ್ನವೋ?"

"ಅಯ್ಯೋ ನನ್ನ ಚಿನ್ನಾ....ಈ ಮನೆ ಯಾರದು! ನಿನ್ನದಲ್ಲವೇ?"

"ನನ್ನನ್ನು ಯಾರು ಮದುವೆಯಾಗುತ್ತಾರೆ ಅಣ್ಣಯ್ಯಾ."

"ಅದರ ಯೋಚನೆ ನಿನಗೇತಕ್ಕೆ?"

"ನನಗೆ ಅದಕ್ಕೆ ಅಧಿಕಾರವಿಲ್ಲ ಅಣ್ಣಾ. ಈ ದೇಹವಿನ್ನು ಸೇವೆಯಲ್ಲಿ ಸವೆಯಬೇಕು. ನನ್ನ ಹಾಗೆ ಇರುವವರು ಎಷ್ಟೋ ಮಂದಿ ಇದ್ದಾರೆ.

ಅವರ ಜೀವನ ನನ್ನ ಸೇವೆಯಿಂದ ಉತ್ತಮವಾಗಬೇಕು. ನಿನ್ನ ಸ್ತ್ರೀರಕ್ಷಕ ಸಂಸ್ಥೆಗೆ ನನ್ನ ಕೊಟ್ಟು ಮದುವೆ ಮಾಡಿಬಿಡು."

"ಹಾಗೇ ಆಗಲಿ."

ಎಂದು ನಿಟ್ಟುಸಿರುಬಿಟ್ಟು ಸ್ವಾಮಿ ಒಪ್ಪಿಕೊಂಡು ಹೊರಗೆ ಹೊರಟ. ಸುಂದರಿ ಅಲ್ಲಿಯೇ ಒರಗಿ ಆಗಸದಲ್ಲಿ ಚೆದುರುತ್ತಿದ್ದ ಮೋಡಗಳ ಆಟವನ್ನು ನೋಡುತ್ತ ನಿಂತಳು ಮೋಡಗಳ ಮಧ್ಯೆ ಕಾಣಿಸಿಕೊಂಡ ಸೂರ್ಯನನ್ನು ಕಂಡು ಅವಳ ಮುಖವು ಪ್ರಫುಲ್ಲವಾಯಿತು. ಕೊನೆಗೆ ಮೋಡಗಳು ಪೂರ್ಣವಾಗಿ ಚೆದುರಿ ಹೋಗಿ ಸೂರ್ಯಕಾಂತಿ ಆಗಸಕ್ಕೆಲ್ಲಾ ಹರಡಲು ಅದನ್ನು ನೋಡಲಾಗದೆ ಕಣ್ಣು ಮುಚ್ಚಿ ಕತ್ತು ತಗ್ಗಿಸಿದಳು. ಪಕ್ಕದ ರಸ್ತೆಯಲ್ಲಿ ಭಜನೆಮಾಡಿಕೊಂಡು ಹೋಗುತ್ತಿದ್ದ ಹುಡುಗರ ತಂಡದ ಎರಡು ನುಡಿ ಅವಳ ಕಿವಿಯನ್ನು ಮುಟ್ಟಿತು.

**ರಘುಪತಿ ರಾಘವ ರಾಜಾರಾಮ್**
**ಪತಿತಪಾವನ ಸೀತಾರಾಮ್**

ಅದನ್ನೇ ಆಲಿಸುತ್ತ ಸ್ವಲ್ಪ ಹೊತ್ತು ನಿಂತು, ಬಾಲಕರ ಧ್ವನಿ ಕೇಳದಾಗಲು

**ಪತಿತಪಾವನ ಸೀತಾರಾಮ್**

ಎಂದು ತನ್ನಷ್ಟಕ್ಕೇ ಹೇಳಿಕೊಂಡು ಒಳಕ್ಕೆ ಬಂದಳು.

# ಹಿನ್ನುಡಿ

ನಾನು ೧೯೩೦ ಇಸವಿ ಏಪ್ರಿಲ್ ತಿಂಗಳಲ್ಲಿ ತುಂಗಭದ್ರೆಯ 'ಪ್ರೇಮಾಯತನ' ಆಶ್ರಮಕ್ಕೆ ಪ್ರವಾಸ ಹೋಗಿದ್ದಾಗ ಪಂಡಿತ ತಾರಾನಾಥಜೀಯವರು ಈ ಕಾದಂಬರಿಯ ಸ್ಥೂಲವಸ್ತುವನ್ನು ಹೇಳಿ ಅದರ ಮೇಲೆ ನಾನೊಂದು ನಾಟಕವನ್ನು ಬರೆದರೆ ಚೆನ್ನಾಗಿರುತ್ತದೆಂದು ಸೂಚಿಸಿದರು. ಈ ವರ್ಷದ ತನಕ ಅವರು ಸೂಚಿಸಿದ ವಸ್ತುವಿನ ಕಡೆಗೆ ನನ್ನ ಗಮನವೇ ಹೋಗಿರಲಿಲ್ಲ. ವರ್ಷಾರಂಭದಲ್ಲಿ ಆ ಬಗ್ಗೆ ಆಲೋಚಿಸುತ್ತಾ ನಾಟಕಕ್ಕಿಂತಲೂ ಕಾದಂಬರಿಗೇ ಈ ವಸ್ತು ಚೆನ್ನು ಎಂದು ನಿಶ್ಚಯಿಸಿ ಕಾದಂಬರಿಯನ್ನು ಬರೆದು ಮುಗಿಸಿದೆ. ಪಂಡಿತರು ನಾನು ಬರೆಯಬೇಕೆಂದು ಸೂಚಿಸಿದ ವಸ್ತುವಿಗೂ ಈ ಕಾದಂಬರಿಗೂ ಎಷ್ಟು ಸಂಬಂಧ ಉಳಿದಿದೆಯೆಂದು ನಾನು ಹೇಳಲಾರೆನಾದರೂ ಅವರ ಪ್ರೇರಣೆ, ವಸ್ತುಗಳಿಲ್ಲದಿದ್ದರೆ ಪ್ರಾಯಶಃ ಈ ಕಾದಂಬರಿಯನ್ನು ನಾನು ಬರೆಯುತ್ತಿರಲಿಲ್ಲ ಎಂದು ಧೈರ್ಯವಾಗಿ ಹೇಳಬಲ್ಲೆ. ಇದರಲ್ಲಿ ಬರುವ ಅಭಿಪ್ರಾಯಗಳು, ಹೇಳುವ ರೀತಿ, ಇವುಗಳು ಯಾವದಕ್ಕೂ ಪಂಡಿತರು ಉತ್ತರವಾದಿಗಳಲ್ಲ. ತಾವೇ ಬರೆದಿದ್ದರೆ ಉತ್ಕೃಷ್ಟ ನಾಟಕವಾಗುತ್ತಿದ್ದ ವಸ್ತುವನ್ನು ನನಗೆ ಕೊಟ್ಟ ಪಂಡಿತರನ್ನು ಹೃತ್ಪೂರ್ವಕವಾಗಿ ವಂದಿಸುತ್ತೇನೆ. ಈ ಕಾದಂಬರಿಯ ಮುಕ್ತಾಯಕ್ಕೂ ಶ್ರೀಯುತ ಶಿವರಾಮ ಕಾರಂತರ 'ಸೂಳೆಯ ಸಂಸಾರ' (ಕನ್ಯಾಬಲಿ) ಕಾದಂಬರಿಯ ಮುಕ್ತಾಯಕ್ಕೂ ಸ್ವಲ್ಪ ಹೋಲಿಕೆಯಿದೆ. ಮುಕ್ತಾಯವನ್ನು ಬೇರೆ ರೀತಿ ಕೊಡಬಹುದಾಗಿದ್ದರೂ ಪಂಡಿತರು ಕೊಟ್ಟ ವಸ್ತುವಿನಲ್ಲಿ ಇದೇ ಮುಕ್ತಾಯವಿದ್ದುದರಿಂದ ನಾನು ಅದನ್ನೇ ಅನುಸರಿಸಿದ್ದೇನೆ. ಜೀವನದಿಂದಲೇ ಆಯಲ್ಪಡುವ ವಸ್ತುಗಳಲ್ಲಿ ಇಂತಹ ಹೋಲಿಕೆಗಳು ಬರುವುದು ವಿರಳವಲ್ಲ.

ಜೀವನಯಾತ್ರೆ ಜೀವನದ ಒಂದು ಘೋರಚಿತ್ರ. ಜೀವನ ಎಷ್ಟು ಘೋರವಾಗಿದೆಯೋ ಅದರ ಯಾತ್ರೆಯು ಅಷ್ಟೇ ಘೋರವೂ ದುರ್ಗಮವೂ ಆಗುತ್ತದೆ. ಇಂತಹ ಅನುಭವಗಳು ಎಲ್ಲರ ಜೀವನದಲ್ಲಿಯೂ ಒಂದಲ್ಲ ಒಂದು ಕಾಲದಲ್ಲಿ ಬರುತ್ತದೆಂದಲ್ಲ. ಯಾವ ಒಂದು ಅನುಭವವೂ ಹಾಗೆ

ಆಗಲು ಸಾಧ್ಯವಿಲ್ಲ. ಅನುಭವದ ವಿರಳ ವಿವರದ ಹಿಂದಿರುವ ಸುಖದುಃಖಗಳು ಎಲ್ಲರ ಅನುಭವಕ್ಕೂ ಬಂದೇ ಬರುತ್ತವೆ. ಹರಿಶ್ಚಂದ್ರನ ಹಾಗೆ ಹೆಂಡತಿಯನ್ನು ಮಾರಿ, ಶ್ಮಶಾನವಾಸಮಾಡುವ ಯೋಗ ಎಲ್ಲರಿಗೂ ಬರದಿದ್ದರೂ ಅವನಿಗಿಂತಲೂ ಹೆಚ್ಚಿನ ದಾರ್ಢ್ಯದಿಂದ ಸತ್ಯಕ್ಕೆ ಕಟ್ಟುಬಿದ್ದು ಪಡಬಾರದ ಸಂಕಷ್ಟಗಳನ್ನನುಭವಿಸಿದವರು ಎಷ್ಟೋ ಮಂದಿ ಇದ್ದಾರೆ. ಹರಿಶ್ಚಂದ್ರನ ಸತ್ಯವಾಕ್ಯ ಪರಿಪಾಲನೆಗೆ ಇಹಲೋಕದ ಸ್ವಾಮ್ಯ, ಪರಲೋಕದ ಭವ್ಯಸುಖಗಳು ದೊರೆತವು. ಅವನಿಗೆ ದೊರೆಯುವ ಸಂಭವವೂ ಇತ್ತು, ದೊರಕಿಸಿಕೊಳ್ಳುವ ಆಸೆಯೂ ಇತ್ತು. ಆದರೆ ಇಂದು ಸತ್ಯಕ್ಕೆ ಕಟ್ಟುಬಿದ್ದು ಜೈಲು ಅನುಭವಿಸಿದವರನ್ನು ದೇವತೆಗಳು ಕೂಡ ಮಾತನಾಡಿಸುವುದಿಲ್ಲ; ಪತಿತ ಜನಾಂಗದ ಸೇವೆಗೂ ಸ್ತ್ರೀಯರ ಅಭ್ಯುದಯಕ್ಕೂ ಸಂಬಂಧಪಟ್ಟ ಕೆಲಸಕ್ಕೆ ಕೈಹಾಕಿದವರು ಉಳಿಯುವುದೂ ಕಷ್ಟಕರವಾಗಿದೆ. ಅಂದಿಗಿಂತಲೂ ಇಂದು ಸತ್ಯಪ್ರೇಮದಿಂದ ಒಂದು ಆದರ್ಶಕ್ಕೆ ಹೋರಾಡುವುದು ಎದೆಗಾರಿಕೆಯ ಕೆಲಸವಾಗಿದೆ.

ನಮ್ಮ ಜೀವನದಲ್ಲಿ ಒಂದು ಆದರ್ಶವಿದೆಯೇ?—ಒಂದು ಗುರಿಯಿದೆಯೇ—ಇಹದಲ್ಲಿಯಾಗಲೀ ಪರದಲ್ಲಿಯಾಗಲೀ ತಲೆಯೆತ್ತಿ ತಿರುಗಬೇಕೆಂಬ ಹಂಬಲವಿದೆಯೇ? ಸ್ವಾಮಿ ವಿವೇಕಾನಂದರು ಹೇಳಿದಂತೆ ಇಂದು ನಮ್ಮ ಜನಾಂಗದ ದೇವರು, ಹಿತ, ಭವಿಷ್ಯ ಎಲ್ಲವೂ 'ಕೂಳಾ'ಗಿದೆ. ಕೂಳಿನ ಪೂಜೆಯೇ ಪೂಜೆ—ಅದೇ ಧರ್ಮ, ಅದೇ ಮತ, ಅದೇ ಸಿದ್ಧಾಂತ. ಅದೇ ಸಮಸ್ತವೂ ಆಗಿದೆ. ಜನಾಂಗವೆಲ್ಲವೂ ವೈರಾಗ್ಯವೃತ್ತಿಯನ್ನವಲಂಬಿಸಿ ಪವಾಹಾರಿಬಾಬನಂತೆ ವಾಯುಸೇವನೆಯಲ್ಲಿಯೇ ಜೀವಧಾರಣೆ ಮಾಡಿ ಪಾರಮಾರ್ಥಿಕ ತತ್ತ್ವ ವಿಚಾರದಲ್ಲಿ ಲೀನವಾಗಬೇಕು; ಇಲ್ಲವೆ ಎದುರಿಗೆ ಘೋರ ರೂಪದಲ್ಲಿ ನಿಂತಿರುವ ದಾರಿದ್ರ್ಯರಾಕ್ಷಸನ ಸಂಹಾರಕ್ಕೆ ತೊಡಗಿ ತನ್ನ ಐಹಿಕ ಸುಖಸಾಧನೆಗೆ ಮನಸ್ಸು ಕೊಡಬೇಕು. **ಹಸಿದ ಹೊಟ್ಟೆಯ ಕೂಗನ್ನು ಹರಿನಾಮಾಮೃತವು ಹಿಂಗಿಸಲಾರದು. ಅದಕ್ಕೆ ಹಿಟ್ಟೇಬೇಕು.** ಇಂದು ನಮ್ಮ ದೇಶವು ಈ ಸಮಸ್ಯೆಯಿಂದ ಪೀಡಿತವಾಗಿದ್ದರೂ ಎದುರಿಸಲು ಸಮರ್ಥವಾಗಿಲ್ಲ. ೧೯೧೪ರ ಮಹಾಯುದ್ಧವಾದ ಮೇಲೆ ಜರ್ಮನ್ ರಾಷ್ಟ್ರವು ಪುನಃ ತಲೆಯೆತ್ತುವುದೆಂದು ಯಾರು ನಂಬಿದ್ದರು?–ರಷ್ಯಾ ಇಟಲಿ ಫ್ರಾನ್ಸ್ ದೇಶಗಳ ಕ್ರಾಂತಿ ಇತಿಹಾಸವನ್ನು ಓದಿದವರಿಗೆ ಅವು ಪುನಃ ರಾಷ್ಟ್ರಗಳಾಗಿ

ಉಳಿಯುವವೇ ಎಂದೆನಿಸಸದೇ?—ನೂರಾರು ಬಾರಿ ಪ್ರಚಂಡವಾದ ಜ್ವಾಲಾ ಮುಖಿಯ ವಿಸ್ಫೋಟನ, ಭೂಕಂಪಗಳ ಹಾವಳಿಗೆ ಸಿಕ್ಕಿ ನುಚ್ಚುನೂರಾದರೂ ಜಪಾನು ಇಂದು ಇಡೀ ಜಗತ್ತಿನ ಗಮನವನ್ನು ಸೆಳೆಯುವಂತಹ ದೇಶವಾಗುತ್ತ ದೆಂದು ಯಾರು ಕನಸುಗಂಡಿದ್ದರು?—ಈ ಪವಾಡಗಳೆಲ್ಲಾ ನಮ್ಮ ಕಣ್ಣು ಮುಂದೆಯೇ ನಡೆದಿವೆ. ಶ್ರೀರಾಮಚಂದ್ರ ಎಂದೋ ಒಂದು ಕಾಲದಲ್ಲಿ ಒಂದು ಕಲ್ಲನ್ನು ಪಾದಸ್ಪರ್ಶದಿಂದ ಸ್ತ್ರೀಯನ್ನಾಗಿ ಮಾಡಲು ಸಮರ್ಥನಾಗಿ ದ್ದರೆ ಇಂದು ಮೇಲೆ ಕಾಣಿಸಿದ ದೇಶಗಳು ತಾವು ಮುಟ್ಟಿದ ಪ್ರತಿಯೊಂದು ಕಲ್ಲಿಗೂ ಜೀವದಾನ ಮಾಡುತ್ತಿದ್ದಾರೆ. ಈ ದೇಶಗಳ ಸಂಘಟನ ಶಕ್ತಿಯೊಂದ ನ್ನಲ್ಲದೆ, ಆತ್ಮಾವಲಂಬನವನ್ನೂ ನಾವು ಸ್ವಲ್ಪ ಗಮನಿಸಬೇಕು. ಅವರೂ ನಮ್ಮ ಹಾಗೇ ಒಂದು ಕಾಲದಲ್ಲಿ ಕಲ್ಲುಗುಂಡುಗಳನ್ನೂ ಹಾವು ಹಲ್ಲಿಗಳನ್ನೂ ಪೂಜಿಸು ತ್ತಿದ್ದರು; ಆದರೆ ಇಂದು ಆ ಪೂಜೆ ನಿರರ್ಥಕವೆಂದು ಬಗೆದು ಮಾನವನ ಅಂತರಂಗದಲ್ಲಿನ ಪೂರ್ಣಶಕ್ತಿಯ ಗ್ರಹಿಕೆಗೆ ಮನತೆತ್ತಿದ್ದಾರೆ. ಹೊಸ ಹೊಸ ಶೋಧಗಳಿಂದ ಪಂಚಭೂತಗಳನ್ನು ವಶಪಡಿಸಿಕೊಳ್ಳಲೆತ್ನಿಸುತ್ತಿದ್ದಾರೆ. ನಿಸರ್ಗನಿಯಮಗಳನ್ನು ಕೂಡ ಉಲ್ಲಂಘಿಸಿ ವೃದ್ಧರನ್ನು ತರುಣರನ್ನಾಗಿಸುವ, ಬೇಕಾದಾಗ ಮಳೆ ಬರುವ, ಬಯಸಿದಾಗ ಬೇಕಾದವರಿಂದ ವಾರ್ತೆಬರುವ ಸತ್ತ ವರು ಬಂದು ಜೊತೆಯಲ್ಲಿ ಸಂಭಾಷಿಸುವ ಶೋಧಗಳನ್ನು ಮಾಡುತ್ತಿದ್ದಾರೆ. ಈ ಶತಮಾನವನ್ನು ವಿಜ್ಞಾನಯುಗ, ಶೋಧನಯುಗ ಎಂದು ಹೇಗೆ ಕರೆಯ ಬಹುದೋ ಹಾಗೆ 'ಆತ್ಮಾವಲಂಬನಯುಗ' ಎಂದು ಧಾರಾಳವಾಗಿ ಕರೆಯ ಬಹುದು. ಪಾಶ್ಚಾತ್ಯನು ತನ್ನ ಮಗುವಿಗೆ ಕಾಹಿಲೆ ಬಂದರೆ ದೇವರಿಗೆ ತುಪ್ಪದ ದೀಪ ಹಚ್ಚಿ ಇಡುವುದಿಲ್ಲ–ಡಾಕ್ಟರು ಇರುವಲ್ಲಿಗೆ ಓಡಿ ಔಷಧ ತರು ತ್ತಾನೆ. ಮಾನವನು ತನ್ನ ಶಕ್ತಿಯ ಪೂರ್ಣರೂಪನ್ನೇ ಅರಿಯದೆ, ಮಗುವು ತನಗೆ ಬೇಕಾದುದನ್ನು ಹೇಳಲಾರದೆ 'ಏನಾರೆ ಕೊಡೆಂದು' ಹಟಮಾಡುವಂತೆ ಕಣ್ಣಿಗೆ ಕಾಣದ ದೈವದ ಹೆಸರು ಹಿಡಿದು ರೋಧಿಸುವುದು ಶುದ್ಧ ಅವಿವೇಕ ವೆಂದು ಪಾಶ್ಚಾತ್ಯ ಪ್ರಗತಿಶಾಲಿಗಳು ತೋರಿಸಿದ್ದಾರೆ.

ಪಾಶ್ಚಾತ್ಯರ ತತ್ತ್ವಗಳನ್ನೇ ನಾವು ಸಿದ್ಧಾಂತಗಳೆಂದು ಒಪ್ಪಿಕೊಳ್ಳ ಬೇಕಾಗಿಲ್ಲ; ಅವರ ಬೋಧೆಗಳನ್ನೇ ನಾವು ದೇವವಾಕ್ಯಗಳೆಂದು ಭಾವಿಸಬೇಕಾ ಗಿಲ್ಲ; ಅವರ ಜೀವನವನ್ನು ಅನುಕರಿಸಿ ನಮ್ಮ ಜೀವನವನ್ನು ಮಾರ್ಪಾಟು

ಮಾಡಬೇಕಾಗಿಯೂ ಇಲ್ಲ. ಆದರೆ ಅವರ ಅನುಭವ, ಸಾಧನೆ, ಶ್ರಮಗಳ ಹಿಂದೆ ಇರುವ ಲೋಕಕಲ್ಯಾಣವನ್ನು ಮಾತ್ರ ಗಮನಿಸಬೇಕು. ಒಂದು ಕಾಲ ದಲ್ಲಿ ಗಾಢಾಂಧಕಾರದಲ್ಲಿ ತೊಳಗಿದ್ದ ಪಾಶ್ಚಾತ್ಯದೇಶಗಳಿಗೆ ಪ್ರಾಚ್ಯದೇಶದ ಒಂದು ಜ್ಯೋತಿ ಬೆಳಕನ್ನು ಒಯ್ದಿತು. ಇಂದು ಆ ಬೆಳಕು ನಮಗೆ ಪಾಶ್ಚಾತ್ಯದೇಶದಿಂದ ಬಂದರೆ ಬೇಡವೆನ್ನಬಹುದೇನು? ಅನುಕರಣದಿಂದ ಹೊಲಬುಗೆಟ್ಟಿರುವ ನಮ್ಮ ಬಾಳುವೆ ಪಾಶ್ಚಾತ್ಯರನ್ನು ಅನುಕರಿಸಿ ಇನ್ನೊಂದು ರೂಪದಲ್ಲಿ ಹೊಲಬುಗೆಡಬೇಕೆಂದು ಯಾರೂ ಉದ್ದೇಶಿಸುವುದಿಲ್ಲ. ಆದರೆ ಪಾಶ್ಚಾತ್ಯರಲ್ಲಿ ಮೂಡಿರುವ ತೀಕ್ಷ್ಣವಾದ ವಿಚಾರಶಕ್ತಿ, ಆತ್ಮಾವಲಂಬನ, ಸಮಷ್ಟಿದೃಷ್ಟಿ ನಮ್ಮಲ್ಲಿ ಇನ್ನೂ ಬೆಳೆದಿಲ್ಲ. ಬೆಳೆಯಬೇಕು. ಇದಕ್ಕೆ ಹೊಸ ಸಾಕ್ಷ್ಯವನ್ನು ಕೊಡಬೇಕಾಗಿಲ್ಲ. ಈ ಇಪ್ಪತ್ತು ಶತಮಾನಗಳ ನಮ್ಮ ಇತಿಹಾಸವೇ ತಕ್ಕ ಉದಾಹರಣೆಯಾಗಿದ್ದೆ.

ವಿಚಾರಶಕ್ತಿಯನ್ನು ನಾವು ಅವರಿಂದ ಕಲಿತುಕೊಂಡರೂ ವಿಚಾರದ ಉಗಮಸ್ಥಾನವನ್ನು ನಮ್ಮಲ್ಲಿಯೇ ಕಂಡುಕೊಳ್ಳಬೇಕು. ನಮ್ಮ ಜೀವನ, ನಮ್ಮ ಸುಖದುಃಖ ನಮ್ಮ ದೇಶದ ಪಂಚಭೌತಿಕ ಅನುಕೂಲಗಳನ್ನು ಅನು ಸರಿಸಿದೆ. ಒಂದುಲಕ್ಷ ಎಂಭತ್ತುಸಾವಿರ ಚದುರು ಮೈಲುಗಳಿರುವ ಈ ದೇಶ ದಲ್ಲಿ ನಾನಾಬಗೆಯ ಸಂಸ್ಕೃತಿಗಳು ಪ್ರಚಾರದಲ್ಲಿರುವುದು ನೈಸರ್ಗಿಕವಾಗಿಯೇ ಇದೆ. ಉತ್ತರದ ಮೈಕಟ್ಟು ದಕ್ಷಿಣದಲ್ಲಿಲ್ಲ, ದಕ್ಷಿಣದ ಬುದ್ಧಿಶಕ್ತಿ ಉತ್ತರದ ಲ್ಲಿಲ್ಲ. ನಿಸರ್ಗನಿಯಮಗಳಿಗನುಗುಣವಾಗಿಯೇ ಸಂಸ್ಕೃತಿ ರೂಪಗೊಳ್ಳು ವುದು. ಕಲೆಯಲ್ಲಿಯೂ ಸಾಹಿತ್ಯದಲ್ಲಿಯೂ ಇದರ ಪ್ರತಿಬಿಂಬ ಕಾಣಬರು ತ್ತದೆ. ಆದರೆ ನಮ್ಮೆಲ್ಲರ ಸಂಸ್ಕೃತಿಯನ್ನೂ ಬಗೆಬಗೆಯ ಜನಜೀವನವನ್ನೂ ಕಲಾಸಾಹಿತ್ಯ ರೀತಿಗಳನ್ನು ಕೂಡಿಸಿರುವುದು ಪರಂಪರಾನುಗತವಾಗಿ ಬಂದಿ ರುವ ಧರ್ಮಶ್ರದ್ಧೆ; ಕಾಲಕಾಲಕ್ಕೆ ಒದಗಿ ಈಗ ಮಹಾವಿಪತ್ತಾಗಿರುವ ದುರ್ಭರ ಕ್ಷಾಮ, 'ನಿಸರ್ಗದ ಒಂದು ಸ್ಪರ್ಶ ಜಗತ್ತನ್ನೆ ಒಂದು ಗೂಡಿಸುವುದು' ಎಂದು ಕವಿ ಹೇಳಿದಂತೆ ಬಿಹಾರದಲ್ಲಿ ಭೂಕಂಪವಾಗಲೀ ಜಪಾನಿನಲ್ಲಿ ಭೂಕಂಪವಾಗಿ ನಮ್ಮ ಹೃದಯಗಳು ಅನುಕೂಪದಿಂದ ಮಿಡಿಯುತ್ತವೆ. ಇಡೀ ಜಗತ್ತಿನ ಭಾವೀಸಂಸ್ಕೃತಿಯ ರೂಪವೇ ಇದಾಗುತ್ತದೆಂಬುವುದರಲ್ಲಿ ಸಂದೇಹ ವಿಲ್ಲ. ಧಾರ್ಮಿಕ ವಿಚಾರದಲ್ಲಿ ಅಮೇರಿಕೆಯ 'ಪಾರ್ಲಿಮೆಂಟ್ ಆಫ್

ರಿಲಿಜನ್ಸ್' (Parliament of Relegions) ಪ್ರಯತ್ನಿಸುತ್ತಿರುವುದೂ, ರಾಜಕೀಯ ವಿಚಾರಗಳಲ್ಲಿ ಜಿನೀವಾದ "ಲೀಗ್ ಆಫ್ ನೇಷನ್ಸ್" (League of Nations) ಸಂಸ್ಥೆಯು ಪ್ರಯತ್ನಿಸುತ್ತಿರುವುದೂ ಇದೇ ಉದ್ದೇಶವನ್ನಿಟ್ಟು ಕೊಂಡೇ! ಲೋಕಹಿತದ ದೃಷ್ಟಿಯಲ್ಲಿ ಪ್ರತಿಯೊಂದು ದೇಶವೂ ತನ್ನ ಸಣ್ಣ ಪುಟ್ಟ ಲಕ್ಷಣಗಳನ್ನು ಬಿಡುವುದವಶ್ಯಕವಾದರೂ ಸಂಸ್ಕೃತಿಯ ದೃಷ್ಟಿಯಲ್ಲಿ ಅವವುಗಳ ವೈಶಿಷ್ಟ್ಯವನ್ನು ಅವವು ಕಾಪಾಡಿಕೊಂಡೇ ಬರಬೇಕು. ಇದು ನಮ್ಮ ಭಾರತವರ್ಷಕ್ಕೂ ಅನ್ವಯಿಸೇ ಅನ್ವಯಿಸುತ್ತದೆ.

ಆದರೆ ನಮ್ಮ ಸಂಸ್ಕೃತಿಯಲ್ಲಿ ಉಳಿಸಿಕೊಳ್ಳಬಹುದಾದ ಅಂಶಗಳೆಷ್ಟು—ಅಳಿಸಿಬಿಡಬಹುದಾದ ಅಂಶಗಳಾವುದು ಎಂಬುದೇ ಮುಂದಿನ ಪ್ರಶ್ನೆ. ಧರ್ಮ ಸಿದ್ಧಾಂತರೂಪವಾಗಿ—ಕೆಲವು ಮಹಾತ್ಮರ ಅನುಭವದ ದೃಷ್ಟಿಯಲ್ಲಿ ಸಮಾಜದ ಮುಂದಿಡುವ ತತ್ತ್ವಗಳೇ ಒಂದು; ಸಮಾಜ ಅವುಗಳನ್ನು ಅರ್ಥ ಮಾಡಿಕೊಂಡು ಆಚರಿಸಿರುವ ರೀತಿಯೇ ಒಂದು. ಅವವುಗಳಿಗೆ ಪರಸ್ಪರ ಸಂಬಂಧ ಯಾವಾಗಲೂ ಇದ್ದಂತೆ ಕಂಡುಬರಲಿಲ್ಲ. ಉಪನಿಷತ್ತುಗಳ ಅಮರ ವಾಣಿಯ ಕಾಲದಿಂದ ಮಹಾಭಾರತದ ಕಾಲಕ್ಕೆ ಬರುವ ವೇಳೆಗೇ ನಮ್ಮಲ್ಲಿ ಅನೇಕ ಕುಂದುಕೊರತೆಗಳು ಮೂಡಿಬಿಟ್ಟದ್ದು ಕಾಣಬರುತ್ತದೆ. ಜನತೆ ಸುಲಭವಾಗಿ ಆಚರಿಸಲು ಅನುಕೂಲವಾಗದ ಧರ್ಮ ಮುಂದೆ ಬಂದಿತೆಂದು ಈ ಅಂತರವೇರ್ಪಟ್ಟಿತೋ ಅಥವಾ ವೇದೋಪನಿಷತ್ತುಗಳ ಧರ್ಮ ನಮ್ಮ ಜನತೆಗೆ ಒಗ್ಗಲಿಲ್ಲವೋ ನಿಶ್ಚಯಿಸುವುದು ಸಾಧ್ಯವಾಗಿಲ್ಲ. ಆದರೆ ಇಂದು ಕ್ರೈಸ್ತಮತಕ್ಕೂ, ಇಸ್ಲಾಮಿಗೂ ದೊರೆತಿರುವ ಪ್ರೋತ್ಸಾಹವನ್ನು ನೋಡಿದರೆ ನಮ್ಮ ಧರ್ಮವನ್ನು ಒಂದು ಸೂಕ್ಷ್ಮದರ್ಶಕಯಂತ್ರದಿಂದ ಪರೀಕ್ಷಿಸಬೇಕೆನಿಸುತ್ತದೆ. ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳು ಸಾಮಾಜಿಕ ಧರ್ಮಗಳು. ಸಾಮಾನ್ಯನ ಸಂಕಷ್ಟಗಳನ್ನೂ 'ಬೇಕು ಬೇಡಗಳನ್ನೂ' ಚೆನ್ನಾಗಿ ಅರಿತಿರುವವರು ಪ್ರತಿಪಾದಿಸಿರುವ ಧರ್ಮಗಳಾಗಿವೆ. ಅವರಲ್ಲಿ ಧರ್ಮ ಸಾಮಾನ್ಯರನ್ನು ಹೊಕ್ಕು, ಅವರೊಂದಿಗೆ ವ್ಯವಹರಿಸಿ ತನ್ನ ದಾರಿಗೆ ಎಳೆದುಕೊಂಡಹಾಗೆ ಕಾಣಬರುತ್ತದೆ; ನಮ್ಮಲ್ಲಿ ಧರ್ಮ ಒಂದು ಉನ್ನತಾಸನದಮೇಲೆ ಕುಳಿತು 'ನನ್ನೆಡೆಗೆ' ಬಾರೆಂದು ಠೀವಿಯಿಂದ ದೂತನ ಕೂಡ ಹೇಳಿಕಳುಹಿಸಿದಹಾಗಿದೆ. ಉತ್ಕ್ರಾಂತಿ ಜೀವನದ ಸಾಮಾನ್ಯ ಹಂತಗಳನ್ನು ಮೆಟ್ಟಿ ಮೇಲಕ್ಕೆ ಬಂದವರಿಗೇ

ನಮ್ಮ ಧರ್ಮ. ಆದರೆ ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ಜನತೆ ಆ ಸಾಮಾನ್ಯ ಹಂತಗಳನ್ನು ಹೇಗೆ ಮೆಟ್ಟಬೇಕೆಂಬುದರ ಕಡೆ ಲಕ್ಷ್ಯವಿತ್ತಿದ್ದವು. ನಮ್ಮಲ್ಲಿಯೂ ಮಧ್ವ, ರಾಮಾನುಜ, ಬಸವಾದಿ ಮಹಾನುಭಾವರು ಆ ವಿಚಾರಗಳಿಗೆ ಲಕ್ಷ್ಯವಿತ್ತರು. ಆದರೆ ಒಮ್ಮುಖವಾದ, ರಾಷ್ಟ್ರೀಯವಾದ ಪ್ರಯತ್ನವಿಲ್ಲವಾದ್ದರಿಂದ ನಮ್ಮ ಧರ್ಮ ಸಾಮಾಜಿಕಧರ್ಮವಾಗದೆ, ವ್ಯಕ್ತಿಗಳಲ್ಲಿಯೇ ತೃಪ್ತಿಪಟ್ಟುಕೊಳ್ಳುವಂತಾಯಿತು.

ಇದರಲ್ಲಿ ಧರ್ಮದ ಹಾಗೂ ಆಚರಣೆಯ ಉತ್ತರವಾದಿತನವನ್ನು ಪೃಥಕ್ಕರಿಸಲಾಗುವುದಿಲ್ಲ. ಲಕ್ಷಣಶಾಸ್ತ್ರದಲ್ಲಿ 'ಷಡಂಗ ಲಕ್ಷಣ' ನಮ್ಮ ಚಿತ್ರಕಲೆಯನ್ನು ನಿರ್ದೇಶಿಸಿದೆ. ಈ ಲಕ್ಷಣವನ್ನು ಅನುಸರಿಸಿದ-ಒಂದು-ಒಂದೇ ಒಂದು ಚಿತ್ರವನ್ನೂ ನಾವು ಆಚರಣೆಯಲ್ಲಿ ಕಾಣೆವು. ಶಿಲ್ಪ, ಗಾನ, ಸಾಹಿತ್ಯ, ಮೊದಲಾದ ಎಲ್ಲ ಕ್ಷೇತ್ರಗಳಲ್ಲಿಯೂ ಈ ಅಂತರವನ್ನು ನಾವು ಕಾಣಬಹುದು. ಆದ್ದರಿಂದ ವಿಮರ್ಶಕ ಒಮ್ಮೊಮ್ಮೆ ಆಚರಣೆಯ ತಪ್ಪನ್ನು ಧರ್ಮದ ಮೇಲೆ ಹಾಕುವ ದೋಷವನ್ನು ಮಾಡಬೇಕಾಗುತ್ತದೆ. ವಿಧವೆಯರಿಗೆ ಮುಂಡನ ಮಾಡುವುದು, ದೇವರ ಹೆಸರಿನಲ್ಲಿ ಅರಿಯರ ಬಾಲಿಕೆಯರನ್ನು ವೇಶ್ಯಾವೃತ್ತಿಗೆ ತಳ್ಳುವುದು, ಚಟ್ಟಕ್ಕೆ ದಿಬ್ಬೆಯಾಗಲು ಅರ್ಹನಾಗಿರುವ ಮನುಷ್ಯನನ್ನು ವಿವಾಹಮಂಟಪದ ಶೋಭಿತಮೂರ್ತಿಯನ್ನಾಗಿ ಮಾಡುವುದು—ಇವುಗಳಿಗೆ ನಮ್ಮ ಧರ್ಮದ ಒಪ್ಪಿಗೆ ಇದ್ದ ಹಾಗೆ ಕಾಣುವುದಿಲ್ಲ. ಸತೀ, ಸಹಗಮನಗಳ ಬೆಲೆ ಕಾವ್ಯಗಳಿಂದ ಧರ್ಮದಸ್ಥಾನಕ್ಕೆ ಹಿಂದೆ ಏರಿದ್ದರೂ ಧರ್ಮದ ಒಪ್ಪಿಗೆ ಅವುಗಳಿಗೆ ಇರಲಿಲ್ಲವೆಂದು ರಾಜಾ ರಾಮಮೋಹನರಾಯರು ಪ್ರತಿರೋಧ ಬರದಂತೆ ಆಧಾರ ಸಹಿತವಾಗಿ ತೋರಿಸಿದ್ದಾರೆ. ಆದರಿವೆಲ್ಲವೂ ಧರ್ಮದ ಹೆಸರಿನಲ್ಲೇ ನಡೆಯುತ್ತಿರುವುದು! ಬಾಲ್ಯವಿವಾಹದಂತಹ ಪೈಶಾಚ ಪದ್ಧತಿಗೆ ಮನುವಿನಂತಹ ಮಹಾನುಭಾವನ ಒಪ್ಪಿಗೆಯಿದೆ. ಆದರೆ ಇನ್ನು ಕೆಲವು ರೂಢಿಯ ರಾಕ್ಷಸೀವೃತ್ತಿಗಳಿಗೆ ಧರ್ಮದ, ಧರ್ಮಕಾರರ ಒಪ್ಪಿಗೆಯಿಲ್ಲ—ಆದರೂ ಅವೆಲ್ಲವೂ ಧರ್ಮದ ಹೆಸರನ್ನು ಮುಂದುಮಾಡಿಕೊಂಡೇ ಬೆಳೆದವು. ಧರ್ಮದ ಪ್ರವಾದಿಗಳು ಅವುಗಳನ್ನು ಖಂಡಿಸಲಿಲ್ಲವೆಂದಮೇಲೆ ಶಾಂತರೀತಿಯ ಒಪ್ಪಿಗೆಯನ್ನು ಕೊಟ್ಟಂತೆ ತಾನೆ!

ನಾಲ್ಕಾರು ವರ್ಷ ಇಟ್ಟಿದ್ದ ಚೂರ್ಣ, ಘೃತ, ಪಾಕಾದಿಗಳು ನಿಸ್ಸತ್ವ

ವಾಗುತ್ತವೆಂಬುದು ವೈದ್ಯರ ಮತ. ದೇಹದ ಒಂದು ಸಣ್ಣ ಪೀಡನೆಯನ್ನು ಪರಿಹರಿಸಬಲ್ಲ ಸಣ್ಣ ಔಷಧವೇ ಹೀಗೆ ಕೆಲಕಾಲಾನಂತರ ನಿರುಪಯೋಗ ಪದಾರ್ಥಗಳ ಪಟ್ಟಿಗೆ ಸೇರಬಹುದಾದರೆ ಕಲ್ಪಕಲ್ಪಗಳು ಇರಬೇಕಾದ ಜಗತ್ತಿನ ಪೀಡನೆಗಳನ್ನು ಪರಿಹರಿಸಬಲ್ಲ ಸಂಸ್ಥೆಗಳ ಮಾತೇನು? ಇಂದಿನ ಘರ್ಷಣೆಗೆ ಇದೇ ಮೂಲ. ನಿನ್ನಿನ ಹಿತವೇ ಇಂದಿನ ಹಿತ—ಅದೇ ನಾಳಿನ ಹಿತ ಎನ್ನುವವರಿಗೂ ನಿನ್ನಿನ ಹಿತ ಹಿಂದಿನದಲ್ಲ—ನಾಳೆಯದೂ ಅಲ್ಲ, ಆಯಾ ಕಾಲದ ಹಿತವನ್ನು ಆಯಾ ಕಾಲವೇ ಸೃಷ್ಟಿಸಿಕೊಳ್ಳಬೇಕು ಎನ್ನುವವರಿಗೂ ಸಂಗ್ರಾಮವೇರ್ಪಟ್ಟಿದೆ.

ಈ ಸಂಗ್ರಾಮ ಉಗ್ರರೀತಿಯಲ್ಲಿ ನಮಗೆ ಕಾಣಬರುತ್ತಿರುವುದು ಸ್ತ್ರೀಯರಿಗೆ ಸಂಬಂಧಪಟ್ಟ ಪ್ರಶ್ನೆಗಳಲ್ಲಿ. ಅನಾದಿಕಾಲದಿಂದಲೂ ಸ್ತ್ರೀಯನ್ನು ಪರಾಶಕ್ತಿಯ ಅವತಾರವೆಂದು ಭಾವಿಸಿ ಪೂಜಿಸುತ್ತ ಬಂದಿರುವ ದೇಶವೆಂದು ನಮ್ಮ ಭಾರತವರ್ಷಕ್ಕೆ ಖ್ಯಾತಿ ಬಂದಿದೆ. ಮನುಮಹಾಶಯನು ಕೂಡ

**« ಯತ್ರನಾರ್ಯಸ್ತು ಪೂಜ್ಯಂತೆ ರಮಂತೆ ತತ್ರದೇವತಾಃ ।**
**ಯತ್ರೈತಾಂಸ್ತು ನ ಪೂಜ್ಯಂತೆ ಸರ್ವಾಸ್ತ ತ್ರಾಫಲಾಃಕ್ರಿಯಾಃ ॥ »**

ಹೆಂಗಸರು ಎಲ್ಲಿ ಸನ್ಮಾನಿತರೋ ಅಲ್ಲಿ ದೇವತೆಗಳು ಪ್ರಸನ್ನರು;
ಅವರು ಎಲ್ಲಿ ಸನ್ಮಾನಿತರಲ್ಲವೋ ಅಲ್ಲಿನ ಕರ್ಮಗಳೆಲ್ಲಾ ವ್ಯರ್ಥ.

ಎಂದು ಹೇಳಿದ್ದಾನೆ. ಅದೇ ಮನುಮಹಾರಾಯನೇ

**« ಪಿತಾರಕ್ಷತಿ ಕೌಮಾರೇ ಭರ್ತಾರಕ್ಷತಿ ಯೌವನೇ ।**
**ಪುತ್ರೋರಕ್ಷತಿ ವಾರ್ಧಕ್ಯೇ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ »**

ಕೌಮಾರಾವಸ್ಥೆಯಲ್ಲಿ ಸ್ತ್ರೀಗೆ ತಂದೆಯೂ, ಯೌವನದಲ್ಲಿ ಪತಿಯೂ, ವೃದ್ಧಾಪ್ಯದಲ್ಲಿ ಮಗನೂ ರಕ್ಷಕರು. ಆದ್ದರಿಂದ ಸ್ತ್ರೀಯು ಸ್ವಾತಂತ್ರ್ಯಕ್ಕೆ ಅನರ್ಹಳು.

ಎಂದೂ ಹೇಳಿದ್ದಾನೆ. ಮನಸ್ಸು ಮೆಚ್ಚಿದುದನ್ನು ಆತ್ಮಬೋಧೆ ಪ್ರೇರೇಪಿಸಿದುದನ್ನು ಆಚರಿಸಲಾಗದ ತೊಳಲಾಟವನ್ನು ಮನುವಿನಲ್ಲಿ ಸ್ಪಷ್ಟವಾಗಿ ನಾವು ಕಾಣಬಹುದು. ಸ್ತ್ರೀಗೆ ವಿಶೇಷ ಸನ್ಮಾನವನ್ನಿತ್ತು ಮಾತೃಸ್ಥಾನವನ್ನು ಕಲ್ಪಿಸಿಕೊಟ್ಟಿರುವ ನಮ್ಮ ದೇಶದಲ್ಲಿ ಪ್ರಸಾರದಲ್ಲಿರುವ ಈ ಶ್ಲೋಕ ನಮ್ಮ ಜನರ ಚಿತ್ತವೃತ್ತಿಯನ್ನು ಚೆನ್ನಾಗಿ ಕನ್ನಡಿಸುತ್ತದೆ:

**“ಔದುಂಬರಾಣಿ ಪುಷ್ಪಾಣಿ । ಶ್ವೇತವರ್ಣಂಚ ವಾಯಸಂ ।
ಮತ್ಸ್ಯಪಾದಂ ಜಲೇಪಶ್ಯನ್ । ನನಾರೀಹೃದಯಸ್ಥಿತಂ ॥”**

—ಔದುಂಬರ ಪುಷ್ಪಗಳನ್ನೂ ಬಿಳಿಯ ಕಾಗೆಯನ್ನೂ ನೀರಿನಲ್ಲಿ ಓಡಿಯಾಡುವ ಮೀನುಗಳ ಹೆಜ್ಜೆಗಳನ್ನೂ ಕಣ್ಣಾರೆ ನೋಡುತ್ತಿದ್ದರೂ ನಾರೀಹೃದಯದಲ್ಲಿರುವುದನ್ನು ನೋಡಲಾಗುವುದಿಲ್ಲ.

ಇಂದಿನ ದೃಷ್ಟಿ ಇವೆರಡನ್ನೂ ಒಪ್ಪುವುದಿಲ್ಲ. ಸ್ತ್ರೀ ಸರಸ್ವತಿ, ದುರ್ಗಿ, ಪಾರ್ವತಿ, ಲಕ್ಷ್ಮಿ ಎಂದೂ ಒಪ್ಪುವುದಿಲ್ಲ. ಅಹಲ್ಯಾ, ತಾರಾ, ಮಂಡೋದರಿ, ದ್ರೌಪದಿ, ಸೀತಾ, ಸಾವಿತ್ರಿ, ದಮಯಂತಿಯರಂತೆ ಮಹಾ ಪತಿವ್ರತೆಯೆಂದೂ ನಂಬುವುದಿಲ್ಲ. ಇಲ್ಲಿ ಸೂಚಿತ ಸ್ತ್ರೀಯರ ಜೀವನಗಳು ಹೇಗಿತ್ತೆಂದು ಶಾಸ್ತ್ರೀಯವಾಗಿ ಐತಿಹಾಸಿಕವಾಗಿ ವಿವೇಚಿಸುವುದು ನನ್ನ ಉದ್ದೇಶವಲ್ಲ. ಆದರೆ ಅವರ ಕವಿಕೃತ ಸಾಮ್ರಾಜ್ಯದ ನಾಯಕಿಯರೆಂಬುದನ್ನು ಮರೆಯಲಾಗುವುದಿಲ್ಲ. ರಾಮಾಯಣದಂತಹ ಮಹಾಕಾವ್ಯವನ್ನು ಬರೆದ ವಾಲ್ಮೀಕಿ ಮಹರ್ಷಿಗೆ ಸೀತಾ, ಮಂಡೋದರಿಯರಿಬ್ಬರೇ ಅಲ್ಲವೇ ಕಣ್ಣಿಗೆ ಬಿದ್ದವರು. ಆ ಕಾಲದಲ್ಲಿ ಇನ್ನು ಯಾವ ಹೆಂಗಸೂ ಪತಿವ್ರತೆಯಾಗಿರಲಿಲ್ಲವೆಂದು ಅರ್ಥವೇ? ಸೀತಾ ಮಂಡೋದರಿಯರ ಆದರ್ಶಜೀವನಗಳನ್ನು ನಮ್ಮ ಅನುಸರಣೆಗಾಗಿ ಕವಿ ಮುಂದಿಟ್ಟಿದ್ದಾನೆ. ಅದಕ್ಕೆ ನಾವು ಕೃತಜ್ಞರು. ಆದರೆ ಜೀವನವನ್ನು ನೋಡೋಣ—ಅದು ಸಾಧ್ಯವೋ. ಆ ಕಾಲದ ಸ್ಥಿತಿಯೇನು?—ಈ ಕಾಲದ ಸ್ಥಿತಿಯೇನು? ಆ ಕಾಲದಲ್ಲಿಯೇ ಸೀತೆಯಂತಹ ಮಹಾಪತಿವ್ರತೆಯಾದ ದೇವತೆಯ ನೀತಿಯನ್ನು ಟೀಕಿಸುವ ರಜಕನಿದ್ದ. ಅವನ ಮಾತು ವಿಷ್ಣುಸ್ವರೂಪಿಯಾದ ಭಗವಾನ್ ಶ್ರೀರಾಮಚಂದ್ರಮೂರ್ತಿಗೆ ಪ್ರಧಾನವಾಯಿತು. ಇಂದಿನ ಸಾಮಾನ್ಯರಾದ ನಮಗೆ ಆ ಆಚರಣೆ ಒಪ್ಪಿಗೆಯೋ? ಅಗ್ನಿಪರೀಕ್ಷೆಯಿಂದ ಉತ್ತೀರ್ಣಳಾದ ಜಗದ್ವಂದ್ಯೆಯೆಂದೆನಿಸಿಕೊಂಡ ಮಾನಿನಿಯನ್ನು ಒಬ್ಬ ಹುಲ್ಲು ಮಾನವನ ಮಾತಿಗೆ ಬೆಲೆಯಿತ್ತು ಕಾಡುಪಾಲು ಮಾಡುವುದು ಒಪ್ಪಿಗೆಯೋ? ಅಹಲ್ಯೆಯಂತಹ ಪತಿವ್ರತೆ ಇಂದ್ರನ ವಿಲೋಭನೆಗೆ ಮರುಳಾಗಿ ಎಡವಿದಳು ಎಂದು ಆದಿಕವಿಯೇ ಹೇಳಿದ್ದಾನೆ. ರಾಮಾಯಣ ಕಾಲದಂತಹ ‘ಪವಿತ್ರ ಯುಗ’ದಲ್ಲಿಯೇ, ಅಹಲ್ಯೆಯಂತಹ ಪತಿವ್ರತೆ ಎಡವಬೇಕಾದರೆ ಇನ್ನು ಕಲಿಕಾಲದ ಮಾತೇನು? ಅಂದಿಗೂ

ಇಂದಿಗೂ ಬಹಳ ಅಂತರವೇರ್ಪಟ್ಟಿದೆ. **ಅಂದಿನ ದೇವರು ಆಚಾರ ವಾಗಿತ್ತು; ಇಂದಿನ ದೇವರು ವಿಚಾರವಾಗಿದೆ.** ಸ್ತ್ರೀಯನ್ನು ಕನಸಿನ ಸಾಮ್ರಾಜ್ಯದ ಪಟ್ಟಮಹಿಷಿಯನ್ನಾಗಿ ಮಾಡಿ 'ನೀನು ದೇವತೆ'ಯೆಂದು ಕರೆದು ಆಕೆಯನ್ನು 'ಘೋಷಾಬಂಧನ'ದಲ್ಲಿಡುವುದು ನಮಗೆ ಒಪ್ಪಿಗೆ ಯಾಗಿಲ್ಲ. ದೇವತೆ 'ನ ಸ್ತ್ರೀಸ್ವಾತಂತ್ರ್ಯಮರ್ಹತಿ' ಹೇಗಾಗುವಳೋ ನಮಗೆ ಅರ್ಥವಾಗುವುದಿಲ್ಲ.

ಇಂದಿನ 'ವಿಚಾರ ತರಂಗ' ಹೆಂಗಸಿಗೆ ಮಾನವ್ಯವನ್ನು ಕಲ್ಪಿಸಿ ಕೊಡುವ ಉದ್ದೇಶಪಟ್ಟುಕೊಂಡಿದೆ. ತಾನು ದೇವತೆಯೆಂಬ ಕನಸನ್ನು ಅವಳಲ್ಲಿ ಪರಿಹರಿಸಿರುವುದು ಮಾತ್ರವಲ್ಲದೆ ಕೆಲಸಕ್ಕೆ ಬಾರದ ಒಂದು ತುಚ್ಛ ವಸ್ತು ಎಂಬ ಭಾವನೆಯನ್ನೂ ಪರಿಹರಿಸಲೆತ್ನಿಸುತ್ತಿದೆ. ಬೃಹದಾರಣ್ಯ ಕೋಪನಿಷತ್ತು ಬಹಳ ಉಚ್ಚವಾದ ಒಂದು ಭಾವನೆಯನ್ನು ಉಚ್ಚರಿಸಿತು

**" ಸ ಇಮ ಮೇವಾತ್ಮಾನಂ ದ್ವೇಧಾಪತಯೇತ್**
**ತತಃ ಪತಿಶ್ಚ ಪತ್ನೀಚಾ ಭಾವತಾಮ್ "**

ಆ ಪ್ರಜಾಪತಿಯೇ ಈ ಶರೀರವನ್ನು ಎರಡು ಭಾಗವಾಗಿ
ಮಾಡಿದನು ಮತ್ತು ಅವುಗಳಿಂದಲೇ ಪತಿಪತ್ನಿಯರಾದರು.

ಇದನ್ನೇ ವಿಜ್ಞಾನರೀತ್ಯಾ ವಿಚಾರ ಮಾಡುತ್ತಿರುವ ಹ್ಯಾವಲಾಕ್ ಇಲ್ಲಿಸ್, ಬರ್ಟ್ರೆಂಡ್ ರಸಲ್ ಇವರುಗಳೂ ಒತ್ತಿಯೊತ್ತಿ ಹೇಳುತ್ತಿರುವುದು. ವ್ಯಾಸಮಹರ್ಷಿ

**" ಯಾವಿನ್ನ ವಿಂದತೇ ಜಾಯಾಂ ತಾವದರ್ಧೋಭವೇತ್ "**

ಗಂಡಸು ಹೆಂಡತಿಯನ್ನು ಪಡೆಯುವವರೆಗೂ ಒಂದರ್ಧವೇ ಆಗಿರುತ್ತಾನೆ.

ಎಂದು ಹೇಳಿರುವುದನ್ನೇ ಬರ್ಟ್ರೆಂಡ್ ರಸಲ್

" I believe marriage to be the best and most important relation that can exist between two human beings. If it has not often been realized hitherto, that is chiefly because husbands and wives have regarded

themselves as each other's policemen. If marriage is to achieve its possibilities husbands and wives must learn to understand that whatever the law may say, in their private lives they must be free"

ವಿವಾಹ ಸ್ತ್ರೀಯರ ಉತ್ಕ್ರಾಂತಿ ಜೀವನಕ್ಕೆ ಅವಶ್ಯಕವೇ ಇಲ್ಲವೋ
ಎಂಬುದನ್ನು ವಿವೇಚಿಸುವುದಕ್ಕೆ ಮೊದಲು, ಸ್ತ್ರೀಯರ ಜೀವನದ ಘಟ್ಟಗಳನ್ನು
ಗಮನಿಸಬೇಕು- ಶಾಸ್ತ್ರ ಹೆಣ್ಣು ಎಂಟು ವರ್ಷಕ್ಕೆ ಮದುವೆಯಾಗಬೇಕು
ಎಂದು ವಿಧಾಯಕ ಮಾಡಿತು—ಅದು ಅನೇಕ ಅನರ್ಥಗಳಿಗೆಡೆಯಾಗಿ
ದೇಶದಲ್ಲಿ ಅಂಗವಿಕಲರ ಸಂಖ್ಯೆ ಬಿಳೆಯಿಸತೊಡಗಿತು. ಹರವಿಲಾಸ ಶಾರದಾ
ಯವರ ಮಸೂದೆ ಸಮ್ಮತಿಯ ವಯಸ್ಸನ್ನು ಎಂಟರಿಂದ ಹದಿನಾಲ್ಕಕ್ಕೆ ಏರಿ
ಸಿತು. ಅಂದರೆ ಈಗ ಹದಿನಾಲ್ಕರವರೆಗೆ ಒಂದು ಭಾಗವಾಗಿಯೂ ಹದಿನಾಲ್ಕರ
ಮೇಲೆ ಒಂದು ಭಾಗವಾಗಿಯೂ ಸ್ತ್ರೀಯ ಜೀವನವನ್ನು ವಿಭಾಗಿಸಬಹುದು.
ಮೊದಲಿನ ಹದಿನಾಲ್ಕು ವರ್ಷಗಳು ದಾಂಪತ್ಯಜೀವನದ ಸಿದ್ಧತೆಯ ವರ್ಷ
ಗಳು. ದಾಂಪತ್ಯಜೀವನಕ್ಕೆ ಈಗ ಸಿಕ್ಕುತ್ತಿರುವ ಸಿದ್ಧತೆಯೆಂದರೆ ತಾಯಿ
ಅಜ್ಜಿಯವರ ಶಿಕ್ಷೆಯೆ ಶಿಕ್ಷೆ. ವ್ಯಾಸ, ಮನು, ಯಾಜ್ಞವಲ್ಕ್ಯರ ಉಪದೇಶದ
ಸಂಸಾರರೂಪ. 'ಗಂಡನಿಗೆ ವಿಧೇಯಳಾಗಿರು. ಅವನು ರೋಗಿಯಾಗಲಿ,
ಶೀಘ್ರಕೋಪಿಯಾಗಲಿ, ನೀಚನಾಗಲಿ ಅವನನ್ನು ದೇವರಂತೆ ಭಾವಿಸು.' ಈ
ಭಾವನೆಯ ಜೊತೆಗೆ ಅವಿಭಕ್ತ ಕುಟುಂಬದ ಹಾವಳಿಗಳೂ ಸೇರಿ ಹೆಂಗಸಿನ
ಮಾನಸಿಕ ಪ್ರಗತಿ ಎಷ್ಟರಮಟ್ಟಿಗೆ ಸಾಧ್ಯ ಎಂಬುದನ್ನು ಸಿಕ್ಷಯಿಸುತ್ತದೆ.
ಪತಿಗೃಹಕ್ಕೆ ಹೋಗುವುದಕ್ಕೆ ಮುಂಚೆ ಹೆಣ್ಣು ಗೃಹಿಣಿಗೆ ಬೇಕಾದ ಅನೇಕ
ವಿಚಾರಗಳನ್ನು ತಿಳಿದುಕೊಂಡಿರಬೇಕಾಗುತ್ತದೆ. ಮೊದಲನೆಯದಾಗಿ ತಾನು
ತನ್ನ ಪತಿಯ ಭೋಗದ ಹೆಣ್ಣು, ಅವನ ಮನೆಯ ಬಾಣಸಗಿತ್ತಿ ಎಂಬುದು.
ಇದಕ್ಕೆ ತಕ್ಕ ಶಿಕ್ಷಣವೇ ಈಗ ದೊರೆಯುತ್ತಿರುವುದು. ಇಂತಹ ಹೆಣ್ಣು,
ಇದನ್ನು ಕೂಡಿದ ಗಂಡು ಪ್ರಗತಿರಥದ ಎರಡು ಗಾಲಿಗಳಾಗುವುದು, ಪ್ರಕೃತಿ
ಪುರುಷರಾಗುವುದೂ, ಸಮಾಜದ ಸತ್ವಮೂರ್ತಿಗಳಾಗುವುದೂ ಶಕ್ಯವೇ?

ಹೆಣ್ಣು, ತಾನು ಜಗತ್ತಿನ ಬೆಳವಳಿಗೆಗೆ ಸಾದಕವಾಗುವ ಒಂದು

ಶಕ್ತಿಯೆಂದು ಅರಿಯುವುದಕ್ಕೆ ಮೊದಲು ತಾನು ಸಚೇತನಳಾದ ಮಾನವ ವ್ಯಕ್ತಿಯೆಂಬುವನ್ನು ಗ್ರಹಿಸಬೇಕು. ಜಗತ್ತು ಹೇಗೆ ತನ್ನ ಗರ್ಭದೊಳಗೆ ಅಡಕವಾಗಿದೆಯೋ ಹಾಗೆಯೇ ಅದರ ಕಲ್ಯಾಣವೂ ತನ್ನನ್ನು ಆಶ್ರಯಿಸಿದೆ ಎಂಬುದನ್ನು ಗ್ರಹಿಸಬೇಕು. ಮುಂದಿನ ಸಂತಾನದ ಸಂಸ್ಕೃತಿ, ಪ್ರತಿಭೆ, ಲೋಕಸೇವೆ ತನ್ನ ತಪಃಪ್ರಭಾವಗಳೆಂಬುದನ್ನು ಗ್ರಹಿಸಬೇಕು. **ನಮ್ಮ ಜನಾಂಗದ ಮೌಢ್ಯಕ್ಕೆ ನಮ್ಮ ತಾಯಂದಿರ ಮೂಢ್ಯವೇಕಾರಣ; ನಮ್ಮ ತಾಯಂದಿರ ಮೌಢ್ಯಕ್ಕೆ ಅವರ ಅಸ್ವಾತಂತ್ರ್ಯವೇ ಕಾರಣ.** ಮಗುವಿಗೆ ನಮ್ಮವರು ಕಲಿಸುವುದು ಗಂಡು ಹೆಣ್ಣಿನ ಆಟ, ಅದು ಸ್ವಲ್ಪ ಬೆಳೆಯಿತೆಂದರೆ ಭಾವಿ ತೋಡಿ ಸಣ್ಣ ಬಣ್ಣದ ಕುಡಿಕೆಯನ್ನು ದಾರದಲ್ಲಿ ಕಟ್ಟಿ ನೀರು ಸೇದುತ್ತದೆ, ಇನ್ನೂ ಸ್ವಲ್ಪ ಬೆಳೆಯಿತೆಂದರೆ ತಾಯಿಯ ಜತೆಗೆ ಸಂಸಾರದ ಸಣ್ಣ ಪುಟ್ಟ ಕೆಲಸಗಳನ್ನು ಮಾಡಲು ತೊಡಗುತ್ತದೆ, ಇನ್ನೂ ಸ್ವಲ್ಪ ಬೆಳೆಯಿತೆಂದರೆ ತಾಯಿಯು ಹೆರುವ ಹೊಸ ಮಕ್ಕಳ ಯೋಗಕ್ಷೇಮ ವನ್ನು ನೋಡಿಕೊಂಡು ಅವುಗಳ 'ಚಿಕ್ಕತಾಯಿ' ಆಗುತ್ತದೆ, ಇನ್ನು ಸ್ವಲ್ಪ ದಿವಸಕ್ಕೆ ಅದಕ್ಕೇ ಮದುವೆಯಾಗಿ ಅದೇ ಮಕ್ಕಳನ್ನು ಹೆರಲು ತೊಡಗುತ್ತದೆ. ಅನಂತರ ಮಕ್ಕಳು–ಕಾಹಿಲೆ; ಮಕ್ಕಳು–ಕಾಹಿಲೆ; ಕೊನೆಗೆ ಅಕಾಲಮೃತ್ಯು!! ಈ ವಿಷವ್ಯೂಹ ಹೆಣ್ಣನ್ನು ಸಮಾಜ ಯಾವ ಸ್ಥಿತಿಗಿಳಿಸುತ್ತದೆಯೆಂಬುದನ್ನು ಚೆನ್ನಾಗಿ ಮನವರಿಕೆ ಮಾಡಿಕೊಡುತ್ತದೆ. ಮಗುವಿನಲ್ಲಿ ಸುಪ್ತವಾಗಿರುವ ಚೇತನಗಳು ಜಾಗೃತಗೊಳ್ಳಲು ಮಾರ್ಗವೇ ಇಲ್ಲ. ಹೆಣ್ಣಿಗೆ ಒಂದೆರಡು ವರ್ಷವಾಗುವಷ್ಟರಲ್ಲಿಯೇ ತಾಯಿ ಗಂಡುಮಕ್ಕಳ ಜತೆಯಲ್ಲಿ ಅವು ಆಡಲು ನಿಷೇಧಿಸುತ್ತಾಳೆ. ತಾಯಿಯೂ, ಅವಳ ಗೆಳತಿಯರೂ, ದೊಡ್ಡ ಅಕ್ಕಂದಿರೂ ಮತ್ತು ಅವರ ಗೆಳತಿಯರೂ ತಮ್ಮ ವಿಲಾಸಕ್ಕೆ ಆಡಿಕೊಳ್ಳುವ ಕಾಮಸಂಬಂಧ ಮಾತುಗಳನ್ನು ಕೇಳಿಕೇಳಿ ಮಗುವಿನ ಚಿತ್ತವೃತ್ತಿ ಅನಾಯಾಸವಾಗಿ ಆ ಕಡೆಯೇ ಹರಿಯುತ್ತದೆ. ಪರಂಗಿಯವರಲ್ಲಿ ೨೦—೨೪ ವರ್ಷಗಳಾದರೂ ಎಳೆಯ ಮಕ್ಕಳಂತೆ ಆಡುವ ತರುಣಿಯರನು ನಾವು ಬೇಕಾದ ಹಾಗೆ ನೋಡ ಬಹುದು. ನಮ್ಮಲ್ಲಿ ಹಾಗೆ ಆಡುವ ಎಂಟು ಹತ್ತು ವರ್ಷದ ಮಕ್ಕಳು ಸಿಕ್ಕುವುದೂ ದುರ್ಲಭ. ವಿದ್ಯೆಯ ಸಂಸ್ಕಾರವಿಲ್ಲ—ಉನ್ನತವಾದ ಆದರ್ಶ ವಿಲ್ಲ—ಸುಪ್ತವಾದ ತನ್ನ ಯೋಗ್ಯತೆಯ ಅರಿವಿಲ್ಲ. ಇಂತಹ ಪರಿಸ್ಥಿತಿಯಲ್ಲಿ

ಹೆಣ್ಣು ರಾಷ್ಟ್ರಕ್ಕೆ ಏನು ಹಿತವನ್ನುಂಟುಮಾಡಬಹುದು, ಸಮಾಜಕ್ಕೆ ಯಾವ ಉಪಕಾರವನ್ನೆಸಗಬಹುದು, ತನ್ನ ಕೈಹಿಡಿದವನ ಜೀವನಕ್ಕೆ ಹೇಗೆ ಧ್ರುವ ತಾರೆಯಾಗಬಹುದು ?

ಇದರ ಮೂಲಕಾರಣ ಮೊದಲೇ ವಿವರಿಸಿದಂತೆ ಸಾಮಾಜದಲ್ಲಿ ಸಾರ್ವತ್ರಿಕವಾಗಿ ಹಬ್ಬಿರುವ ರೂಢಿಯ ಮೊಬ್ಬು. **ಮಕ್ಕಳು ಮುಂದಕ್ಕೆ ಬರಬೇಕಾದರೆ ತಾಯಿಯರನ್ನು ಮುಂದಕ್ಕೆ ತರುವ ವ್ಯವಸ್ಥೆಯನ್ನು ಮೊದಲು ತರಬೇಕು.** ಸಮಾಜ ವ್ಯವಸ್ಥೆಯ ಶೃಂಖಲೆಯಿಂದ ಬದ್ಧಳಾದ ತಾಯಿಯ ತಲೆಯಲ್ಲಿ, ಮಗಳು ದೊಡ್ಡವಳಾಗುವಳಲ್ಲಾ—ಆ ವೇಳೆಗೆ ಲಗ್ನ ಮಾಡಿಬಿಡಬೇಕು; ಗಂಡನ ಮನೆಯ ಸೇವೆಯನ್ನು ಹೇಗೆ ಮಾಡಬೇಕೆಂಬುದನ್ನು ಅವಳಿಗೆ ಕಲಿಸಬೇಕು ಎಂಬೆರಡು ವಿಚಾರಗಳು ತುಂಬಿರುತ್ತವೆ. ಗೃಹಿಣಿಯಾಗುವ ಯೋಗ್ಯತೆ ಇರಲಿ ಇಲ್ಲದಿರಲಿ ಮಾರಿಯೌತನಕ್ಕೆ ಹೋಗುವ ಕುರಿಯಂತೆ ಹೆಣ್ಣು ವಿವಾಹವೇದಿಕೆಗೆ ಬಲಿಯಾಗುತ್ತದೆ.

ಹಿಂದೂ ವಿವಾಹಪದ್ಧತಿಯನ್ನು ನಿಶ್ಚಯಿಸಿರುವುದು ಬಾಲಿಕೆಯರು ಸ್ತ್ರೀತ್ವವನ್ನು ಪಡೆಯುವ ಕಾಲ. ವೈದ್ಯಶಾಸ್ತ್ರ ವಿಶಾರದರು ನಿಶ್ಚಯಿಸಿರುವಂತೆ ನಮ್ಮ ಬಿಸಿದೇಶದಲ್ಲಿ ಸಾಮಾನ್ಯವಾಗಿ ಹನ್ನೊಂದನೆಯ ವರ್ಷದಿಂದ ಬಾಲಿಕೆಯರು ಸ್ತ್ರೀತ್ವವನು ಪಡೆಯಲು ಆರಂಭಿಸುತ್ತಾರೆ. ಅದೇ ವಯಸ್ಸು ಅವರ ದಾಂಪತ್ಯ ಜೀವನಕ್ಕೆ ಯೋಗ್ಯವಾದ ವಯಸ್ಸೆಂದು ನಮ್ಮ ಹಿರಿಯರು ನಿಶ್ಚಯಿಸಿ 'ಗರ್ಭಾಧಾನ ಮಹೋತ್ಸವ'ದ ಏರ್ಪಾಟುಗಳನ್ನು ಮಾಡಿಯೂ ಬಿಡುತ್ತಾರೆ. ಇದಕ್ಕಿಂತಲೂ ದೇಹ, ಆತ್ಮಘಾತಕವಾದ ಆಚರಣೆ ಬೇರೊಂದಿಲ್ಲ. ಹೆಣ್ಣುಮಗುವಿಗೆ ಪ್ರಜ್ಞೆ ಮೂಡುವ ತನಕ ಕಾಯದೆ ಅದು ಒಪ್ಪಲಿ ಒಪ್ಪದಿರಲಿ ಸಮಾಜದ ಭಯಕ್ಕೆ ಅದಕ್ಕೆ ವಿವಾಹಕರ್ಮಗಳನ್ನೆಸಗುವುದು ವ್ಯಕ್ತಿಗೂ, ರಾಷ್ಟ್ರಕ್ಕೂ ಹಾನಿಕರ. ಯಾವದೇ ಕಾರಣದಿಂದ ಒಂದು ದೇಹದ ಮೇಲೆ ಇಂತಹ ಅವಿಚಾರವನ್ನು ನಡೆಸುವುದಕ್ಕೆ ಯಾರಿಗೂ ಅಧಿಕಾರವಿಲ್ಲ. ತನ್ನದಲ್ಲದ ದೇಹವನ್ನು ದಂಡಿಸುವುದು ಹೇಗೆ ಶಿಕ್ಷಾರ್ಹವಾದ ನಡತೆಯೆಂದು ನಿಶ್ಚಯವಾಗಿದೆಯೋ ಹಾಗೆ ವಿವಾಹದ ಹೆಸರಿನಲ್ಲಿ ಅರಿಯದಬಾಲಿಕೆಯರ ದೈಹಿಕ ಮಾನಸಿಕ ಬೆಳವಣಿಗೆಗಳನ್ನು ಘಾತಿಸುವ ತಂದೆತಾಯಿಗಳನ್ನೂ ಗಂಡಂದಿರನ್ನೂ ಒಪ್ಪುವ ಎಲ್ಲ ಸಂಬಂಧಿಗಳನ್ನೂ ಪೌರೋಹಿತ್ಯ ನಡೆಸುವ ವೈದಿಕ ಜನರನ್ನೂ ಸಮಾಜ

ದಂಡಿಸಬೇಕು. ಖೂನಿ ಹಟಸಂಭೋಗ, ಮಾನಾಪಹಾರವೇ ಮೊದಲಾದ ದಾಷ್ಟ್ಯಗಳಿಗೆ ಯಾವ ಸಿಕ್ಷೆ ವಿಧಾಯಕವಾಗಿದೆಯೋ ಅದನ್ನು ಈ ಮಹಾಪ ರಾಧಕ್ಕೂ ವಿಧಿಸಬೇಕು. ಜನತೆಯಲ್ಲಿ ಈ ಬಗ್ಗೆ ನೈತಿಕ ಜ್ಞಾನವನ್ನು ಪತ್ರಿಕಾಕರ್ತರೂ, ಸಾಹಿತಿಗಳೂ, ಕಲಾವಿದರೂ ಸಮಾಜ ಸುಧಾರಕರೂ ತಮ್ಮ ತಮ್ಮ ಸಾಧನಗಳ ಮೂಲಕ ಪ್ರಸಾರಗೊಳಿಸಬೇಕು.

ಸಮಾಜ ಮತ್ತು ಅದರ ಪ್ರತಿನಿಧಿಯೆನಿಸಿದ ಸರ್ಕಾರ ಸ್ತ್ರೀಯರಿಗೆ ತಕ್ಕ ವಿದ್ಯೆ ಯಾವದು, ಅವರನ್ನು ನಮ್ಮ ಶಾಲೆ—ಕಲಾಶಾಲೆಗಳ ಪಠ್ಯ ಪದ್ಧತಿಗಳಿಗೆ ತಳ್ಳಿದರೆ ನಿಜವಾದ ವಿದ್ಯೆಯ ಅರಿವುಂಟಾಗುತ್ತದೆಯೇ ಎಂಬು ದನ್ನು ವಿವೇಚಿಸಬೇಕು. ಈಗಿರುವಂತೆ ಗ್ರಂಥಮಥನದಿಂದ ಯಾವ ಪ್ರಯೋ ಜನವೂ ಆಗಲಾರದೆಂದು ಹೇಳಬಹುದು. ಸ್ವಾನುಭವವಿಲ್ಲದ, ಗ್ರಂಥಸ್ಥ ವಿದ್ಯೆ ನಿಸರ್ಗದಿಂದ ವಿದ್ಯಾರ್ಥಿಯನ್ನು ದೂರಮಾಡಬಲ್ಲುದಲ್ಲದೆ ಸಮೀಪಕ್ಕೆ ತರಲಾರದು. ವಿದ್ಯೆ ಪ್ರಕೃತಿಯನ್ನರಿಯುವ ಸಾಧನವಾಗಿರಬೇಕು. ಕಠೋಪ ನಿಷತ್ಕಾರನು ಹೇಳುವಂತೆ ಅವಿದ್ಯೆಯನ್ನು ಯಾವದು ಹೋಗಲಾಡಿಸುವು ದಿಲ್ಲವೋ ಅದು ವಿದ್ಯೆಯೇ ಅಲ್ಲ—ಅದರಿಂದ ಯಾವ ಪ್ರಯೋಜನವೂ ಇಲ್ಲ.

ವಿದ್ಯೆಯ ಗುರಿಯು ವ್ಯಷ್ಟಿಯ ಹಿತ—ಸಮಷ್ಟಿಯ ಪ್ರಗತಿ. 'ನಿನ್ನ ಸುಖವನ್ನು ಮೀಸಲಿಟ್ಟು ಸಮಾಜದ ಹಿತವನ್ನು ಸಾಧಿಸು' ಎಂದು ಹೇಳಿ ದಲ್ಲಿ ಅದನ್ನು ಅನುಸರಿಸುವ ಶಕ್ತಿ ಬಹಳ ಮುಂದಿಗಿರುವುದಿಲ್ಲ. ವ್ಯಕ್ತಿ ಕೇವಲ ತನ್ನ ಹಿತವನ್ನೇ ನೋಡುತ್ತ ಕುಳಿತಿರುವುದಕ್ಕಾಗುವುದೂ ಇಲ್ಲ. ತನ್ನ ಮತ್ತು ಸಮಾಜದ ಹಿತ ಹೇಗೆ ಸಾಧ್ಯವಾಗುವುದೆಂಬುದರ ಕಡೆಗೆ ವಿದ್ಯಾ ರ್ಥಿಯ ದೃಷ್ಟಿಯಿರಬೇಕು. ದಿವಂಗತ ಲಾಲಾ ಲಜಪತಿರಾಯರು ಹೇಳಿದಂತೆ 'ವಿದ್ಯೆ ಜೀವನದ ಸಂಗ್ರಾಮವನ್ನು ಎದುರಿಸಲು ತಕ್ಕ ಸೈನಿಕರನ್ನಾಗಿ ನಮ್ಮ ಬಾಲಕ ಬಾಲಿಕೆಯರನ್ನು ಮಾಡಬೇಕು. ಅವರು ಋಷಿಗಳೂ ಸನ್ಯಾಸಿಗಳೂ ಆಗಬೇಕಾದದ್ದಿಲ್ಲ. ಇಂದಿನ ಬಾಲಕ ಬಾಲಿಕೆಯರೇ ಮುಂದಿನ ಜನಾಂಗದ ಪ್ರಜೆಗಳು. ಅವರ ಮಧ್ಯೆ ನಮ್ಮ ಮುಂದಿನ ರಾಜಕಾರಣದುರುಧ ರರೂ, ಆಡಳಿತಗಾರರೂ, ದಂಡನಾಯಕರೂ, ಸಂಶೋಧಕರೂ, ವಿಜ್ಞಾನ ವೇತ್ತರೂ, ಕೈಗಾರಿಕೆಗಳ ಒಡೆಯರೂ ಹುಟ್ಟಬೇಕು. ಕೇವಲ ವೇದಾಂತಿ ಗಳೂ ಭಾವಿಕರೂ ಉಪಾಧ್ಯಾಯರೂ ಹುಟ್ಟಿ ಬಂದರೆ ಸಾಲದು.'

ನಮ್ಮ ಸ್ತ್ರೀಶಾಲೆಗಳಲ್ಲಿ ಪ್ರಸಾರವಾಗುತ್ತಿರುವ ವಿದ್ಯೆಯಗುರಿ ಇದಾಗಿಲ್ಲ. ಇಂದಿನ ಸುಶಿಕ್ಷಿತ ಸ್ತ್ರೀಯರದೇ ಒಂದು ಸಮಾಜವಾಗುತ್ತಿದೆ. ಅವರದೇ ಒಂದು ಸಂಸ್ಕೃತಿ, ಅವರದೇ ಒಂದು ನಡೆವಳಿಕೆ—ಅವರದೇ ಒಂದು ಲೋಕ. ಇದು ಅವರನ್ನು ಸಮಾಜದ ಚಿತ್-ಜ್ಯೋತಿಯ ಬಳಿ ತರುವುದು ಹಾಗಿರಲಿ, ಸಮಾಜದಿಂದ ಬಹಳ ದೂರ ತೆಗೆದುಕೊಂಡು ಹೋಗದಿದ್ದರೆ ಸಾಕಾಗಿದೆ. ಶಾಲೆಗಳನ್ನು ಬಿಟ್ಟುಬರುವ ಹೊತ್ತಿಗೆ ನಿಸ್ತೇಜರಾಗಿ ಗುಳಿಬಿದ್ದ ಕಣ್ಣುಗಳ ಮೇಲೆ ಕನ್ನಡಕಗಳನ್ನುಧರಿಸಿ, ಕ್ಷಾಮ ಪೀಡಿತರಂತೆ ಬರುವ ತರುಣಿಯರ ಸಮೂಹವನ್ನು ನೋಡಿ ವಿಷಾದಪಡಬೇಕಾಗಿದೆ. ವಿದ್ಯೆ ಈಗ ಶಾಲೆಗಳಲ್ಲಿ ಒಂದು ಯಂತ್ರವಾಗಿದೆ. ಅದಕ್ಕೆ ವಿದ್ಯಾರ್ಥಿನಿಯರನ್ನು ಇತ್ತು ಹಲವು ವರ್ಷ ನುರುಗಿಸಿದ ಮೇಲೆ ಹಣೆಗೊಂದು ಡಿಗ್ರಿಯನ್ನೊತ್ತಿ ಕಳುಹಿಸಿಬಿಡುತ್ತದೆ. ಇಂತಹ ವಿದ್ಯೆಯಿಂದ ನಮ್ಮ ಬಾಲಿಕೆಯರು ಸಂಪಾದಿಸುವುದು ಎಥೆಲ್‌ಡೆಲ್, ಎಡ್ಗಾರ್‌ವಾಲೆಸ್, ಗಾರ್ವಿಸ್, ಕಾಲಿಟ್ ಇವರೇ ಮೊದಲಾದ ಕೆಲವು ಸಣ್ಣ ತರಗತಿಯ ಕಾದಂಬರಿಕಾರರನ್ನು ಓದಿ ಅವರ ಸಾಹಿತ್ಯಪ್ರತಿಭೆಯನ್ನು ಚರ್ಚಿಸುವ ಸಾಮರ್ಥ್ಯ! ಇವರೇ ಮುಂದಿನ ತಾಯಂದಿರು! ಬರಲಿರುವ ನಮ್ಮ ಕಾಳಿದಾಸ, ಶಿವಾಜಿ, ಪುಲಕೇಶಿ, ಪಂಪ, ರನ್ನರ ಜನನಿಯರು !!

ವಿದ್ಯೆಗೂ ಜೀವನಸಿದ್ಧತೆಗೂ ಒಂದು ಎಲ್ಲೆಕಟ್ಟನ್ನು ವಿಧಿಸಲು ಸಾಧ್ಯವಿಲ್ಲ. ಬಾಲಿಕೆ ತಾನಾಗಿ ಜೀವನವನ್ನು ಬಯಸುವ ತನಕ ಅವಳನ್ನು ಒಂದು ಬಾಳಿಗೆ ನೂಕುವುದು ನ್ಯಾಯವಲ್ಲ. ವಿದ್ಯೆಯ ಕಡೆಗೆ ನಮ್ಮವರು ಹೇಗೆ ಲಕ್ಷ್ಯವಿಟ್ಟಿಲ್ಲವೋ ಹಾಗೆಯೇ ಬಾಲಿಕೆಯ ವಿವಾಹದ ವಿಚಾರವಾಗಿಯೂ ಸರಿಯಾದ ದೃಷ್ಟಿಯನ್ನು ಪಡೆದಿಲ್ಲ. ವಿವಾಹ—ಸಂತಾನಾಭಿವೃದ್ಧಿಯ ದೃಷ್ಟಿಯಲ್ಲಿ ಸಾಮಾಜಿಕ ವಿಷಯವಾದರೂ ಮಿಕ್ಕ ವಿಷಯಗಳಲ್ಲಿ ವ್ಯಕ್ತಿಗೇ ಸಂಬಂಧಪಟ್ಟ ವಿಚಾರ. ಧರ್ಮದದೃಷ್ಟಿಯಲ್ಲಿ ವಿವಾಹಕ್ಕಿರುವ ಮಹತ್ವವನ್ನು ಅತ್ತ ಇಡೋಣ. ಯಾವ ಒಂದು ನಿಕಟವಾದ ಮೆಲ್ಪಂಕ್ತಿಯನ್ನೂ ಧರ್ಮದ ಹಾದಿಯಲ್ಲಿ ನಮ್ಮ ಜೀವನ ಅನುಸರಿಸದಿರುವಾಗ ಇದೊಂದು ವಿಚಾರದಲ್ಲಿ ಧರ್ಮವನ್ನು ಆಚರಿಸುತ್ತಿದ್ದೇವೆಂದು ಏತಕ್ಕೆ ಸೋಗುಹಾಕಬೇಕು? ವಿವಾಹವಿಧಿಯಲ್ಲಿ ವಧುವಿನ ತಂದೆ ಕನ್ಯಾದಾನ ಮಾಡಿ ವರನನ್ನು

«ಧರ್ಮೇಚಾರ್ಥೇಚಾ ಕಾಮೇಚಾ ನಾತಿಚರಿತವ್ಯಾ ತ್ವಯೇಯಂ»
ನೀನು ಧರ್ಮ, ಅರ್ಥ ಮತ್ತು ಕಾಮದಲ್ಲಿ ಇವಳನ್ನು ಮೀರಿ ನಡೆಯಬೇಡ.
ಎಂದು ಪ್ರಾರ್ಥಿಸುವುದಕ್ಕೆ ವರ
« ನಾತಿ ಚರಿಷ್ಯಾಮಿ »
ನಾನು ಮೀರುವುದಿಲ್ಲ.

ಎಂದು ವಾಗ್ದಾನಮಾಡುತ್ತಾನೆ. ಈ ಮಂತ್ರದ ಅರ್ಥ ವರನಿಗಾಗಲೀ, ವಧುವಿಗಾಗಲೀ, ವಧುವಿನ ತಂದೆಗಾಗಲೀ ನೂರರಲ್ಲಿ ತೊಂಭತೊಂಭತ್ತು ಸಲ ತಿಳಿದಿರುವುದಿಲ್ಲ. ವಧುವಿನ ಕಡೆಯ ಪುರೋಹಿತ ವಾಗ್ದಾನ ಬೇಡುತ್ತಾನೆ, ವರನ ಕಡೆ ಪುರೋಹಿತ ವಾಗ್ದಾನ ಮಾಡುತ್ತಾನೆ. ಗಂಡು ಹೆಣ್ಣನ್ನು ಕೂಡಿಸಿ ದೊಡ್ಡವರು ಆಡುವ ನಾಟಕವೇ ವಿವಾಹ–ಇದಕ್ಕೆ ಧರ್ಮದ ಮುದ್ರೆ! ಅನೇಕ ಸಲ ಶೋಪೆನ್ಹೊ ಹೇಳಿದಂತೆ ನಮ್ಮಲ್ಲಿ 'ವಿವಾಹವೆಂದರೆ ನಿಸರ್ಗವು ನಮಗೆ ಹೂಡುವ ಬಲೆ.'* ವಿವಾಹಸಂಸ್ಥೆಯ ಹಿಂದೆ ಬಹಳ ದೊಡ್ಡ ಆದರ್ಶಗಳಿವೆ. ಎರಡು ಆತ್ಮಗಳ ಪವಿತ್ರಮಿಳನ, ಪ್ರಕೃತಿ ಪುರುಷರ ಐಕ್ಯ ಇತ್ಯಾದಿ, ಇತ್ಯಾದಿ. ಆದರೆ ಜೀವನದಲ್ಲಿ ಕೇವಲ ಕಾಮಬಂಧನವಲ್ಲದೆ ಬೇರೆ ಯಾವ ಬೆಲೆ ಬಂದಿದೆ ವಿವಾಹಕ್ಕೆ. ಗಂಡು ಹೆಣ್ಣುಗಳನ್ನು ಹಸೆಯ ಮೇಲೆ ಕೂಡಿಸಿ ಹಾಡುವ ಹಾಡುಗಳೇ ಸಾಲದೆ ಇದರ ಸ್ವರೂಪವೇನೆಂದು ತೋರಲಿಕ್ಕೆ. ಮೇರಿ ಕೊರೆಲಿ ಎಂಬ ವಿದುಷಿ ಹೇಳುವಂತೆ

> "Men and women marry for physical attraction, convenience, necessity or respectability,–and the legal bond is necessary both for their sakes and the worldly welfare of the children born to them; but LOVE which is physical and transcendental together—LOVE that is to last through an imagined Eternity of progress and fruition, this is a mere chimera."

---

* Marriage is a trap which Nature sets for us.

ಸಂಪೂರ್ಣಪ್ರೇಮ, ತ್ಯಾಗ, ಆತ್ಮಾರ್ಪಣಗಳಿಂದ ಇವತ್ತು ನಮ್ಮ ವಿವಾಹ ಮಂಟಪ ನಿರ್ಮಿತವಾಗುತ್ತಿದೆಯೆಂಬುದನ್ನು ನಾವು ನಂಬಲು ಸಾಧ್ಯವಿಲ್ಲ. ಪ್ರತಿಯೊಬ್ಬ ಸ್ತ್ರೀಯೂ ಶಾಕುಂತಲೆಯಂತೆಯೂ ಪ್ರತಿಯೊಬ್ಬ ಪುರುಷನು ಮಜನುವಿನಂತೆಯೂ ಇರಲು ಸಾಧ್ಯವಿಲ್ಲ. ಜೀವನದಲ್ಲಿ ವಿವಾಹಕ್ಕೆ ಇರುವ—ಇರಬೇಕಾದ ಸ್ಥಾನವನ್ನು ಮೊದಲು ನಿಶ್ಚಯಿಸಿಕೊಂಡೇ ವ್ಯಕ್ತಿ ಅದರ ಉಪಯೋಗವನ್ನು ಪಡೆದುಕೊಳ್ಳಲು ಮುಂದುವರಿಯಬೇಕು. ವಿವಾಹ ಪದದ ಅರ್ಥ ಹೊಳೆಯುವುದಕ್ಕೆ ಮುಂಚೆಯೇ ಬಾಲಿಕೆ ತನ್ನ ಗಂಡನ ಮೋರೆ ನೋಡುವಂತೆ, ವಿವಾಹದ ಪ್ರಯೋಜನವನ್ನು ಮನನಮಾಡಿಕೊಂಡು ಅದರ ಆವಶ್ಯಕತೆಯನ್ನು ಕಂಡುಕೊಳ್ಳುವುದಕ್ಕೆ ಮುಂಚೆಯೇ ತರುಣನು ವಿವಾಹಿತನಾಗಿರುತ್ತಾನೆ. ಹಂಬಲ ಹುಟ್ಟದೆ ಒದಗಿದ ಇಂತಹ ಸಂಬಂಧಗಳು ನುಚ್ಚುನೂರಾಗುವುದೆಂಬುದನ್ನು ನಮ್ಮ ತಾಯ್ತಂದೆಗಳು ಮರೆಯದಿರಬೇಕು. ಧರ್ಮ, ಸಮಾಜ, ಕಟ್ಟುಪಾಡುಗಳು, ಕಾಯಿದೆ ಇವುಗಳೆಲ್ಲವನ್ನೂ ಮೀರಿದ ಮಹಾಶಕ್ತಿಯೊಂದಿದೆ. ನಿಸರ್ಗದ ಸಂವೇದನೆ. ವಿವಾಹಿತಳಾಗಿದ್ದ ಷಿರೀನ್ ಫರ್ಹಾದನನ್ನು ಬಯಸಿದ್ದರಲ್ಲಿ, ಐವರು ಪತಿಗಳನ್ನು ಪಡೆದಿದ್ದರೂ ಸದಾ ಕರ್ಣನಿಗಾಗಿ ಹಂಬಲಿಸುತ್ತಿದ್ದ ದ್ರೌಪತಿಯಲ್ಲಿ, ಮೇರಿ ಗುಡ್ವಿನ್ನಳೊಂದಿಗೆ ತನ್ನ ಸ್ಥಾನಮಾನಗಳನ್ನು ಮರೆತು ಓಡಿಹೋದ ಷೆಲ್ಲಿಯಲ್ಲಿ ಇದರ ವಿಶ್ವರೂಪವನ್ನು ಕಾಣಬಹುದು. ಯಾವ ಮನಸ್ಸು ಯಾವ ಪ್ರಿಯ ವಸ್ತುವನ್ನು ಆಶಿಸುವುದು ಎಂಬುದನ್ನು ಇತರರು ನಿಶ್ಚಯಿಸಲಾಗುವುದಿಲ್ಲ. ಸೂಕ್ಷ್ಮವಾದ ಮಾನವ ಮನಸ್ಸಿನ ಶ್ರೇಯ ಪ್ರೇಯಗಳನ್ನು ಅರಿಯುವುದು ಬಹಳ ಕಠಿಣ ಸಮಸ್ಯೆ.

ಈ ವಾದ ಅನೀತಿವ್ಯಾಪಾರವನ್ನು ಜರುಗಿಸಲು ಪೀಠಿಕೆಯನ್ನು ಹಾಕಿಕೊಟ್ಟಂತಾಗುವುದಿಲ್ಲವೇ? ಇಷ್ಟು ಕಟ್ಟುಕಾಯಿದೆಗಳಿರುವಾಗಲೇ ಯುವಕಯುವತಿಯರ ನೀತಿ ನಲುಗುತ್ತಿರುವಾಗ ಇನ್ನು ಯಾವ ಹಿಡಿತವೂ ಇಲ್ಲದಿದ್ದ ಮೇಲೆ ಗತಿಯೇನು? ಎಂಬುದು ಸಾಮಾನ್ಯವಾಗಿ ಬರುವ ಸಂದೇಹ ಮೊದಲನೆಯದಾಗಿ ಕಟ್ಟುಕಾಯಿದೆಗಳಿಂದ ನೀತಿಯನ್ನು ಜನಾಂಗಕ್ಕೆ ಬೋಧಿಸುತ್ತೇನೆಂದು ಭಾವಿಸುವುದು ಶುದ್ಧಮೌಢ್ಯ. ಕಟ್ಟುಕಾಯಿದೆಗಳಿಂದ ಪಾನದುರ್ವೃತ್ತಿಯನ್ನು ನಿವಾರಿಸಲು ಹೋದ ಅಮೇರಿಕಾದೇಶದ ಇತಿಹಾಸವೂ,ಆಸಾ

ಧ್ಯವಾದ ನಿರ್ಬಂಧಗಳಿಂದ ವ್ಯಭಿಚಾರವನ್ನು ನಿಲ್ಲಿಸಲೆತ್ನಿಸಿರುವ ದಕ್ಷಿಣ ಅಮೇರಿಕಾ ದೇಶದ ಇತಿಹಾಸವೂ ನಮ್ಮ ಮುಂದೆಯೇ ಇದೆ. ನಮ್ಮಲ್ಲಿಯೂ ವ್ಯಭಿಚಾರ ನಿರೋಧಕ ಮಸೂದೆಗಳು ಪ್ರಚಾರಕ್ಕೆ ಬರುತ್ತಿವೆ. ವ್ಯಭಿಚಾರ, ಪಾನ, ಭಿಕ್ಷಾಟನೆಗಳನ್ನು ನಿಜವಾಗಿಯೂ ನಿಲ್ಲಿಸಲಿಚ್ಛಿಸುವವರು ಅದಕ್ಕೆ ಕಾನೂನಿನ ಮರೆಹೋಗದೆ ಮೂಲಕಾರಣವನ್ನು ಅರಸಿ ಅದಕ್ಕೆ ತಕ್ಕ ಚಿಕಿತ್ಸೆಯನ್ನು ಹುಡುಕಬೇಕು. ಗಿರಣಿಗಳು ದಿನಕ್ಕೆ ಹತ್ತು ಘಂಟೆಯುತೆ ದುಡಿಸಿ ಕೂಲಿಯನ್ನು ಜೀವಯಂತ್ರವನ್ನಾಗಿಸಿ ಹೊರದೂಡದಿದ್ದರೆ ಅವನು ಮದ್ಯಮಂದಿರವನ್ನು ಏತಕ್ಕೆ ಹುಡುಕಿಕೊಂಡು ಹೋಗುತ್ತಿದ್ದ—ಅವನು ಮದ್ಯಪಾನಮಾಡುವುದು ಅವನ ತಪ್ಪೋ ಅವನನ್ನು ರಸವಳಿದ ಕಬ್ಬಿನ ಸಿಪ್ಪೆಯಂತೆ ಮಾಡುವ ಬಂಡವಾಳಗಾರರ ತಪ್ಪೋ? ಎರಡು ಹೊತ್ತು ಉಣ್ಣಲು ಅನ್ನ, ಹೊದೆಯಲು ವಸ್ತ್ರಗಳು ದೊರೆಯದೆಂದು ವ್ಯಭಿಚಾರವೃತ್ತಿಯನ್ನು ಅವಲಂಬಿಸುವರೋ ಅಥವಾ ನಿಜವಾಗಿಯೂ ಅದರಲ್ಲಿ ಸ್ವರ್ಗಸುಖವಿದೆಯೆಂದು ಅವಲಂಬಿಸುವರೋ? ಇದರಲ್ಲಿ ರೂಢಿಯ ಅಧಿಕಾರವೆಷ್ಟು, ವೃತ್ತಿಯನ್ನು ಅವಲಂಬಿಸುವವರ ಒಲವೆಷ್ಟು? ವ್ಯಾಧಿಯ ಮೂಲಕಾರಣವನ್ನು ಗೊತ್ತುಮಾಡಿಕೊಳ್ಳದೆ ಮೇಲೆ ಮೇಲೆ ಚಿಕಿತ್ಸೆಮಾಡುವುದು ಅದರ ಬೆಳವಳಿಗೆಗೆ ಪ್ರೋತ್ಸಾಹಕಾರಿಯಲ್ಲದೆ ನಿರ್ಮೂಲಕ್ಕಲ್ಲ.

ಸ್ತ್ರೀಪುರುಷ ಸಂಬಂಧ ವಿವಾಹದ ಮೂಲಕ ಹೇಗೆ ಸಾಧಿಸಲ್ಪಡುವುದೆಂಬುದಕ್ಕೆ ಮೊದಲು ಅವರ ಸಂಬಂಧವನ್ನು ಗಮನಿಸಬೇಕಾಗುತ್ತದೆ. ನಿಸರ್ಗವೇ ಅವರಲ್ಲಿ ಪರಸ್ಪರ ಆಕರ್ಷಣವನ್ನು ಅನುರಾಗವನ್ನೂ ತಂದಿಟ್ಟಿದೆ. ಸ್ತ್ರೀಪುರುಷ ಸಂಯೋಗದ ಉದ್ದೇಶ ಕೇವಲ ಜನಾಂಗದ ವೃದ್ಧಿಗಾದರೂ ಆ ಕಲ್ಪನೆಯಿಂದ ಸಂಯೋಗವನ್ನು ಬಯಸುವವರು ವಿರಳ. ನಿಸರ್ಗ ಸಂಯೋಗಕ್ರಿಯೆಯಲ್ಲಿಯೇ ಒಂದು ಸುಖವನ್ನಿಟ್ಟಿದೆ. ಸುಖಾಭಿಲಾಷಿಯಾದ ಮಾನವ ಅದರ ಸಾಫಲ್ಯಕ್ಕಾಗಿ ಸಂಯೋಗವನ್ನು ಬಯಸುತ್ತಾನೆ. ಇದು ಒಂದು ಕಾಲದ ಆಕರ್ಷಣ. ಇಷ್ಟರಿಂದಲೇ ಸ್ತ್ರೀಪುರುಷ ಸಂಬಂಧ ಮುಗಿಯುವುದಿಲ್ಲ. ತನ್ನ ಜೀವನದ ಕಷ್ಟ ಕಾರ್ಪಣ್ಯಗಳ ನೋವನ್ನರಿತು ಅದಕ್ಕೆ ಸಮಾಧಾನವನ್ನು ಕೊಡುವ ಒಂದು ವ್ಯಕ್ತಿಯನ್ನು ನಿರ್ಮಲಾಂತಃಕರಣದಿಂದ ಬಯಸುತ್ತಾನೆ. ಅದಕ್ಕೆ ಸ್ತ್ರೀ 'ಶಯನೇಷು ವೇಶ್ಯಾ' ಹೇಗೋ ಹಾಗೇ

ದುಃಖವನ್ನು ಉಪಶಮನಗೊಳಿಸುವ ಮಾತೆಯೂ ಆಗಿದ್ದಾಳೆ. ಅದಕ್ಕೇ ಸ್ತ್ರೀ ತನ್ನ ಜೀವನದ ಘೋರಯಾತನಾ ಸಮಯಗಳಲ್ಲಿ ತನ್ನ ಪುರುಷ ಹತ್ತಿರವಿರಬೇಕೆಂದು ಬಯಸುವುದು (ಉದಾಹರಣೆ: ಹೆರಿಗೆಯ ವೇಳೆ, ಪುತ್ರ ಪುತ್ರೀ ಶೋಕ ಸಮಯ) ಈ ಸಹಾನುಭೂತಿ, ಪರಸ್ಪರ ದುಃಖ ನಿವಾರಣಾ ಸಾಮರ್ಥ್ಯ ಸ್ತ್ರೀಪುರುಷರನ್ನು ಒಂದು ಗೂಡಿಸುತ್ತದೆ. ಇದಲ್ಲದೆ ಇನ್ನೂ ಒಂದು ಕಾರಣವುಂಟು. ರಸರಂಗಗಳಲ್ಲಿ ವಿಶೇಷ ಮುಂದುವರಿದ ಕಲಾವಿದ ತನ್ನ ಕಲಾಪ್ರತಿಭೆಯನ್ನು ಗ್ರಹಿಸಬಲ್ಲ ಸ್ತ್ರೀಯಲ್ಲಿ ಪಡುವ ತೃಪ್ತಿ. ಇದು ಮೇಲಿನ ಎರಡು ಜಾತಿಗೂ ಸೇರಿದ್ದಲ್ಲ. ಉದ್ರಿಕ್ತ ಜೀವನವನ್ನು ಸುಶಾಂತಗೊಳಿಸುವ ಚೇತನ ಪತ್ನಿ, ಮಾತಾ ಅವಸ್ಥೆಗಳಲ್ಲಿದ್ದರೆ ಕಲಾ ಚೇತನಗಳನ್ನು ಉದ್ರೇಕಗೊಳಿಸಿ ಅದು ಒಂದು ಉತ್ತಮ ರೀತಿಯಲ್ಲಿ ರೂಪು ಗೊಳ್ಳುವಂತೆ ಮಾಡುವ ಸಾಮರ್ಥ್ಯ ಇದಕ್ಕಿದೆ. ಈ ಮೂರು ಸಂಬಂಧಗಳ ದೃಷ್ಟಿಯಲ್ಲಿ ನಾವು ವಿವಾಹ, ನೀತಿಗಳನ್ನು ಅಳೆಯಬೇಕಾಗಿದೆ.

ಸ್ತ್ರೀ ಪುರುಷಸಂಸರ್ಗವನ್ನು ಆಶಿಸುವುದು ಹೇಗೆ ನೈಸರ್ಗಿಕವೋ ಅದರ ಫಲವನ್ನು ಅಪೇಕ್ಷಿಸುವುದೂ ನೈಸರ್ಗಿಕ. ಪುರುಷ ತನ್ನ ರಕ್ಷಕನಾಗ ಬೇಕು, ಪ್ರಿಯನಾಗಬೇಕು, ಗೆಳೆಯನಾಗಬೇಕು. ನಮ್ಮ ಸಮಾಜದಲ್ಲಿಯೂ, ದೇಶದಲ್ಲಿಯೂ ಒಂದು ವ್ಯವಸ್ಥೆ ಮಾಡುವುದಕ್ಕೆ ಮುಂಚೆ ರಕ್ಷಣೆಯ ಕಡೆಗೆ ಬಹಳ ಲಕ್ಷ್ಯವಿತ್ತು. ಮೊದಲಿನಿಂದಲೂ ಸ್ತ್ರೀಯನ್ನು ಪುರುಷ ಒಂದು ಕೆಳ ಗಿನ ತರಗತಿಯಲ್ಲಿಡುವುದಕ್ಕೆ ಈ ರಕ್ಷಣೆಯ ಅಧಿಕಾರ ತನಗಿರುವುದೆಂಬ ಹೆಮ್ಮೆ ಯಿಂದಲೇ. ಇದನ್ನು ಗೆಲ್ಲಲು ಜಪಾನು ಸ್ತ್ರೀಶಾಲೆಗಳಲ್ಲೆಲ್ಲಾ ತನ್ನ ಜುಜಿಟ್ಸು ಪದ್ಧತಿಯನ್ನು ಪ್ರಸಾರಕ್ಕೆ ತಂದು, ದೈಹಿಕ ಬಲದಲ್ಲಿ ತನಗಿಂತ ನೂರು ಪಾಲು ದೊಡ್ಡವನಾದ ಪುರುಷನು ಬಂದರೂ ತನ್ನ ಮಾನರಕ್ಷಣೆಯನ್ನು ಹುಸಿ ಮಾಡಿಕೊಳ್ಳಬಹುದೆಂಬ ಧೈರ್ಯವನ್ನಿತ್ತಿತು. ರಷ್ಯಾದೇಶ ತನ್ನ ದೇಶದ ಮಕ್ಕಳು ಪವಿತ್ರದಾಂಪತ್ಯಕ್ಕೇ ಹುಟ್ಟಿರಲಿ, ವ್ಯಭಿಚಾರಕ್ಕೆ ಹುಟ್ಟಿರಲಿ ಅವು ತನ್ನವೆಂಬ ಭಾವನೆಯಿಂದ ಅವುಗಳ ಪೋಷಣೆ, ರಕ್ಷಣೆ, ಶಿಕ್ಷಣಗಳಿಗೆ ಗಮನಕೊಡುತ್ತಿದೆ. ಈಗ ರಕ್ಷಣೆಯ ಭಾರ ಸರ್ಕಾರ ವಹಿಸಿಕೊಂಡಿರುವುದ ರಿಂದ ಸ್ತ್ರೀಪುರುಷರ ಈ ಸಂಬಂಧ ಸೂತ್ರ ಕೊಂಚ ಸಡಿಲವಾಗಿದೆಯೆಂದೇ ಹೇಳ ಬಹುದು. ಆದರೆ ಈ ರಕ್ಷಣೆಗಿಂತ ಸ್ತ್ರೀ ಪುರುಷನಲ್ಲಿ ಹೆಚ್ಚಾಗಿ ಆಶಿಸು

ವುದು ತನ್ನ ಒಡಲಿಂದ ಹುಟ್ಟಿದುದಕ್ಕೆ ಅವನ ರಕ್ಷಣೆ ದೊರೆಯಬೇಕೆಂಬುದು. ತನ್ನ ಮಗುವಿನ ಐಹಿಕ ಹಿತ ಅದರ ತಂದೆಗೆ ಸೇರಿದುದರಿಂದ, ಇದು ಸ್ತ್ರೀ ಪುರುಷರಲ್ಲಿ ಒಂದು ಆದರ್ಶಕ್ಕಾಗಿ ದುಡಿಯುವ ಗೆಳೆತನವನ್ನು ತಂದೊಡ್ಡುತ್ತದೆ. ಆದರೆ ಇವೆರಡಕ್ಕೂ ಪ್ರಬಲವಾಗಿರುವ ಕಾರಣವೆಂದರೆ ನೈಸರ್ಗಿಕ ಆಕರ್ಷಣ. ಪುರುಷನ ಪ್ರೇಮ ಸಹವಾಸವಿಲ್ಲದೆ ತನ್ನ ರಸವಂತಿಕೆಗಳ ಪೂರ್ಣ ವಿಕಾಸಕ್ಕೆ ಮಾರ್ಗವಿಲ್ಲವೆಂಬುದನ್ನು ಸ್ತ್ರೀ ಅರಿತುಕೊಂಡಿರುತ್ತಾಳೆ. ಸ್ತ್ರೀಯ ಸುಪ್ತ ಚೇತನಗಳನ್ನು ಹೊಡೆದೆಬ್ಬಿಸುವ ಶಕ್ತಿ ಪುರುಷನಿಗೂ ಪುರುಷನ ಸುಪ್ತ ಚೇತನಗಳನ್ನು ಹೊಡೆದೆಬ್ಬಿಸುವ ಶಕ್ತಿ ಸ್ತ್ರೀಗೂ ನಿಸರ್ಗವೇ ಕೊಟ್ಟಿರುತ್ತದೆ. ವಿವಾಹ ಈ ಶಕ್ತಿಯ ಪ್ರಚೋದನವನ್ನೀಯುವ ಒಂದು ಸಂಸ್ಥೆ ಎಂದು ನಾವು ತಿಳಿಯಬಹುದು.

ತನ್ನ ಜೀವನದ ಪಂಚಪ್ರಾಣವಾಗಿರುವ ಸಖ ತನಗೆ ಅನುರೂಪನಾಗಿರಬೇಕೆಂದು ಪ್ರತಿಯೊಬ್ಬ ಸ್ತ್ರೀಯೂ ಬಯಸೇ ಬಯಸುತ್ತಾಳೆ. ಕಾಮದ ಆಸೆಯಿದ್ದರೂ ಅದಕ್ಕೆ ಕಲೆಯ ರೂಪವನ್ನಿತ್ತು, ಸಹಜವಾದ ನೈಸರ್ಗಿಕ ಲೀಲೆ ಮಾನವ ದೌರ್ಬಲ್ಯದ ಹಿಡಿಯಾಗದಂತೆ ಕಾಣಬೇಕೆಂದೂ ಬಯಸುತ್ತಾಳೆ. ದೇಹಮಿಲನವೇ ಕಾಮದ ಅಂತ್ಯವಾದರೂ ಅದಕ್ಕೆ ತಕ್ಕ ಸಿದ್ಧತೆಯನ್ನು ಮಾಡಬಲ್ಲ ಕ್ರಿಯೆ ಮುಗಿದನಂತರ ಪ್ರಮೋದಭಾವದಲ್ಲಿ ಸಂಪೂರ್ಣ ಆನಂದವನ್ನು ಸ್ಮರಣೆಯ ಮೂಲಕ ಕೊಡಬಲ್ಲ ಪ್ರೇಮ ಪ್ರದರ್ಶನ ತನ್ನದಾಗಿರಬೇಕೆಂದು ಆಕೆಯ ಬಯಕೆ. ಇದು ತನ್ನಿನಿಯನನ್ನು ತಾನು ಆಯಲು ಸ್ವಾತಂತ್ರ್ಯವಿಲ್ಲದ ಹೆಂಗಸು ಹೇಗೆ ಅನುಭವಿಸಲು ಸಾಧ್ಯ. ಪಾಶ್ಚಾತ್ಯರು ಪ್ರೀತಿಸಿ ವಿವಾಹವಾಗುತ್ತಾರೆಂದೂ ನಮ್ಮವರು ವಿವಾಹವಾಗಿ ಪ್ರೀತಿಸುತ್ತಾರೆಂದೂ ಪ್ರತೀತಿ. ಆದರೆ ನಮ್ಮ ವಿವಾಹಗಳಲ್ಲಿ ಇಂದಾಗಲೀ ಮುಂದಾಗಲೀ ಪ್ರೇಮವಿದೆಯೇ? ಕಾಮ ನಿಸರ್ಗದ ಸಹಜಲೀಲೆಯೆಂಬ ಅರಿವಿನಿಂದ ತನ್ನ ಕಾಮಿನಿ ತನ್ನಂತೆಯೇ ಮಾನವಿ—ಗೌರವಾರ್ಹಳು—ಎಂಬ ಕಲ್ಪನೆಯಿದೆಯೇ? * **ಕಾಮ ನಿಸರ್ಗದ ಒಂದು ಲೀಲೆಯೋ**

* Marriage is for women the commonest mode of livelihood, and the total amount of undesired Sex endured by women is probably greater in marriage than in prostitution. —BERTRAND RUSSELL, Marriage & Morals Page 112

**ವಿನಾ ನಿಸರ್ಗವೇ ಕಾಮವಲ್ಲ.** ಮನುಷ್ಯನ ಸರ್ವತೋಮುಖವಾದ ಬೆಳವಳಿಗೆಗೆ ಆಹಾರ, ನಿದ್ರಾ, ವಸ್ತ್ರ, ವಿದ್ಯೆಗಳು ಹೇಗೋ ಹಾಗೆ ಕಾಮವೂ ಬೇಕು. ಕಾಮಜೀವನವನ್ನು ಸಕಾಲದಲ್ಲಿ ಅನುಭವಿಸದ ಮಾನವನು ನಪುಂಸಕನೋ, ಹುಚ್ಚನೋ, ಲೋಕದ್ವೇಷಿಯೋ ಆಗಿ ಲೋಕಕಂಟಕನಾಗುತ್ತಾನೆ. ಅದು ಅನೇಕ ಬಗೆ ನರದೌರ್ಬಲ್ಯಗಳಿಗೆ ಮಾನವನನ್ನು ಈಡುಮಾಡಿ ಆ ಮೂಲಕ ಅವನ ಬಳಕೆಯ ಜನರ ಜೀವನಗಳನ್ನು ಮಣ್ಣುಗೂಡಿಸಿ ಬಿಡುತ್ತದೆ; ಹಾಗೆಯೇ ಅತಿಯಾದ ಕಾಮಜೀವನವನ್ನು ಅನುಭವಿಸಿದವನೂ ಬಗೆಬಗೆಯ ಪೀಡೆಗಳಿಗೆ ಗುರಿಯಾಗುತ್ತಾನೆ. ದೇಹದ ಬೆಳವಳಿಗೆಗೆ ಆಹಾರಬೇಕೆಂದು ಮೂಟೆಮೂಟೆ ಅಕ್ಕಿಯನ್ನು ಹೇಗೆ ತಿನ್ನಬಾರದೋ ಹಾಗೆ ಜೀವನಕ್ಕೆ ಕಾಮ ಬೇಕೆಂದು ಕಾಮಲೋಲುಪನಾಗಬಾರದು. ಇದು ಸಂಯಮವನ್ನು ಹಾಳು ಮಾಡಿ ಮನುಷ್ಯನು ಬೇರೆ ಯಾವ ಕೆಲಸಕ್ಕೂ ಅರ್ಹನಾಗದ ಹಾಗೆ ಮಾಡಿ ಬಿಡುತ್ತದೆ. ಜೀವನದಲ್ಲಿ ಕಾಮದ ಸರಿಯಾದ ಸ್ಥಾನವನ್ನು ಸ್ತ್ರೀಪುರುಷರು ಅರಿಯುವವರೆಗೆ ಅವರ ಸಂಬಂಧಗಳು ಶುಭಕಾರಿಯಾಗುವುದಿಲ್ಲ. ಇಲ್ಲಿನ ಆದರ್ಶ **ವಿಹಾರದಿಂದ ವಿಕಾಸ.** ಕಾಮವೇ ಜೀವನದ ಅಂತ್ಯವಲ್ಲ. ಅದು ಜೀವನದ ಆದಿ. ಕಾಮದ ಕಾವು ಆರಿದ ಎಷ್ಟೋ ವರ್ಷಗಳಾದ ಮೇಲೂ ಸ್ತ್ರೀಪುರುಷರು (ದಂಪತಿಗಳು) ಅನ್ಯೋನ್ಯವಾಗಿ ಬಾಳಬೇಕು. ಇದಕ್ಕೆ ಮೊದಲೇ ಒಂದು ಬಗೆಯ ಗೆಳೆತನವನ್ನೂ ಉನ್ನತವಾದ ವಿಚಾರಾಶಕ್ತಿಯನ್ನೂ ದೊಡ್ಡದಾದ, ಶ್ರಮಿಸಲು ಯೋಗ್ಯವಾದ ಆದರ್ಶಸಾಧನೆಯ ಆಸೆಯನ್ನು ಮುಂದಿಟ್ಟುಕೊಂಡ ಹೊರತೂ ಯಾವ ದಾಂಪತ್ಯಜೀವನವೂ ಬಹಳ ಕಾಲ ಉಳಿಯುವುದಿಲ್ಲ.

ತನ್ನ ದೇಹದ ಮೇಲೆ ಈ ಬಗೆಯ ಸ್ವಾಮ್ಯವನ್ನು ಕೊಡುವ ಅಧಿಕಾರ ಸ್ತ್ರೀಗಿದೆಯೋ ಅವಳ ತಂದೆತಾಯಿಗಳಿಗಿದೆಯೋ ? ಇನ್ನು ಸೂಳೆಗೇರಿಗಳನ್ನು ತೆಗೆದು ಸ್ತ್ರೀಯರನ್ನು ಹಣಯಿಸೆಯುವ ಹೆಣಗಳಿಗೆ ಒಪ್ಪಿಸುವ ವೃತ್ತಿ ರಾಕ್ಷಸೀವೃತ್ತಿಯಲ್ಲದೆ ಮತ್ತೇನು ? ತನ್ನ ದೇಹದ ಸ್ವಾಮ್ಯ ತನ್ನದೆಂದು ಅರಿತ ಯಾವ ಸ್ತ್ರೀಯೂ ಅದನ್ನು ದುರುಪಯೋಗಪಡಿಸುವುದಿಲ್ಲ, ಆದರೆ ಅದನ್ನು ಸದುಪಯೋಗಪಡಿಸುವ ರೀತಿಯನ್ನು ಸಮಾಜ ಅವಳಿಗೆ ಬೋಧಿಸಿರಬೇಕಲ್ಲದೆ ಅದಕ್ಕೆ ತಕ್ಕ ಅನುಕೂಲಗಳೆನ್ನುಂಟುಮಾಡಿಕೊಡಬೇಕು. **ಎಂದಿನ ವರೆಗೆ ರೂಢಿಯ ಆಚಾರ, ಹಿರಿಯರ ಅವಿಚಾರ, ಧರ್ಮದ ಒತ್ತಾಯ**

**ಗಳಿಂದ ನಮ್ಮ ಹೆಣ್ಣು ಮಕ್ಕಳು ವಿವಾಹ ವೇದಿಕೆಗೆ ಬಲಿಯಾಗುತ್ತಾರೆಯೋ ಅಂದಿನ ತನಕ ನಮ್ಮ ದೇಶದಲ್ಲಿ ನೀತಿಯ ಆಡಳಿತವನ್ನು ತರಲು ಯಾರಿಂದಲೂ ಸಾಧ್ಯವಿಲ್ಲ.**

ಇದರ ಜೊತೆಗೆ ನಮ್ಮ ವಿವಾಹಗಳೆಂದರೆ ಬ್ರಹ್ಮಗಂಟುಗಳು. ಯಾವ ಕಾರಣಕ್ಕೂ ಸ್ತ್ರೀಪುರುಷರು ಬೇರೆಯಾಗಲು ಸಾಧ್ಯವಿಲ್ಲ. ಪುರುಷನು ಒಬ್ಬ ಹೆಂಡತಿ ಬದುಕಿರುವಾಗಲೇ ಬೇರೆ ಎಷ್ಟು ಮಂದಿಯನ್ನು ಬೇಕಾದರೂ ಮದುವೆ ಯಾಗಬಹುದು. ಭಗವಾನ್ ಶ್ರೀ ಕೃಷ್ಣನಿಗೇ ಎಂಟು ಮಂದಿ ಹೆಂಡರಿದ್ದರಂತೆ. ಆದರೆ ಗಂಡಸತ್ತ ಮೇಲೆ ಕೂಡ ಪುನರ್ವಿವಾಹವಾಗಕೂಡದು. ಗಂಡ ಗೌತಮನಂತೆ 'ಅಜ್ಞಯ್ಯ'ನಾಗಿದ್ದರೂ, ಪಾಂಡುವಿನಂತೆ ರೋಗಗ್ರಸ್ಥ ನಾಗಿದ್ದರೂ, ಶ್ರೀರಾಮನಂತೆ 'ಪಿತೃವಾಕ್ಯಪರಿಪಾಲನ ಧುರೀಣ'ನಾಗಿದ್ದರೂ, ಉತ್ತರನಂತೆ ಕ್ಲೀಬನಾಗಿದ್ದರೂ, ಸ್ತ್ರೀ ತನ್ನ ಮಾನವ್ಯವವನ್ನೆಲ್ಲಾ ಅಡಗಿಸಿ ಕೊಂಡು, ಪಾತಿವ್ರತ್ಯವನ್ನು ಪಾಲಿಸಿಕೊಂಡೇ ಬರಬೇಕು! ಈ ವಿಧಾಯಕ ಪುರುಷರಿಗೇಕಿಲ್ಲ? ಗಂಡ ಸತ್ತಮೇಲೆ ಮುಂಡೆ ಬೋಳಿಸಿಕೊಂಡು ಸ್ತ್ರೀ ಅಲ್ಪ ವಸ್ತ್ರ ಧರಿಸಿ ಒಪ್ಪತ್ತು ಊಟಮಾಡಿಕೊಂಡು, ಕೂಳು ಹಾಕುವವರ ಮನೆಯ ಕೂಲಿಯಾಗಿರಬೇಕೆಂದು ವಿಧಿಸುವ ಸಮಾಜ—ಧರ್ಮ ಇದೇ ವಿಧಾಯಕ ವನ್ನು ವಿಧುರರಿಗೇತಕ್ಕೆ ವಿಧಿಸುವುದಿಲ್ಲ. ಸ್ತ್ರೀಯರಿಗೆ 'ಪಾತಿವ್ರತ್ಯ'ವನ್ನು ಬೋಧಿಸಿದಂತೆ, ಪುರುಷರಿಗೇತಕ್ಕೆ 'ಸಾತಿವ್ರತ್ಯ'ವನ್ನು ಬೋಧಿಸುವುದಿಲ್ಲ?— ಇದು ಪುರುಷರ ಪ್ರಪಂಚ. ವಿಧಿಸುವವರು ಅವರು. ಕಾನೂನುಗಳನ್ನು ಬರೆಯುವವರು ಅವರು, ಕವಿಗಳು ಅವರು—ಇನ್ನು ಅವರ ದೃಷ್ಟಿ ಹೇಗೆ ವಿಶಾಲವಾದೀತು? **ದಾಂಪತ್ಯವಿಚ್ಛೇದನ ಮಾಡುವ ಹಕ್ಕು ಸ್ತ್ರೀಗೆ ಬಂದ ಹೊರತೂ ಅವಳಿಗೆ ಸಮಾನಾಧಿಕಾರ ದೊರೆಯುವುದಿಲ್ಲ.** ಕಾವ್ಯ, ಕಲೆ, ಸಮಾಜ, ಧರ್ಮ, ರೂಢಿ ಎಲ್ಲವೂ ಒಂದು ಗುಂಪುಕಟ್ಟಿಕೊಂಡು ಅವಳ ಮೇಲೆ ಪ್ರಭುತ್ವನಡೆಸುವಾಗ ಅದನ್ನು ತಡೆಗಟ್ಟುವ ದಾರಿಯಾವದರೂ ಯಾವುದು? ರೂಢಿಯ ಅಜ್ಞಾನ ಸುಶಿಕ್ಷಿತಳಾದ ತರುಣಿಗೆ ಮೂರ್ಖ ಶಿಖಾಮಣಿಯನ್ನು ಕಟ್ಟಿದರೆ ಅವಳು ಅವನೊಂದಿಗೆ ಹೇಗೆ ಬಾಳುವೆಯನ್ನು ಸಾಗಿಸುವುದು. ಅವಳ ಮುಂದಿರುವುದು ಇಂತಹ ಸನ್ನಿವೇಶಗಳಲ್ಲಿ ಎರಡೇ **ಹಾದಿಗಳು: ಒಂದು ಆತ್ಮಹತ್ಯದ ದಾರಿ; ಇನ್ನೊಂದು ವ್ಯಭಿಚಾರದ ದಾರಿ!**

ಕಾವ್ಯಗಳು ಆತ್ಮಹತ್ಯವನ್ನು ಎತ್ತಿ ತೋರುತ್ತಿದ್ದರೂ ಸ್ನೇಹಲತೆಯ ಆದರ್ಶ ಸ್ತ್ರೀಯರ ಮುಂದಿದ್ದರೂ ಅವರಲ್ಲಿ ಬಹಳ ಮಂದಿ ಅಂತಹ ಸಾಹಸಕ್ಕೆ ಕೈ ಹಾಕುವುದಿಲ್ಲ. ಸಾಯಲು ಧೈರ್ಯವುಳ್ಳವರು ಜಗತ್ತನ್ನೇ ಜಯಿಸಬಲ್ಲರು. ಸಾಮಾನ್ಯ ಜನತೆ ಇಂತಹ ಸನ್ನಿವೇಶಗಳಲ್ಲಿ ಅನುಸರಿಸುವ ಮಾರ್ಗವೊಂದೇ ವ್ಯಭಿಚಾರ. ಇದನ್ನು ತಡೆಗಟ್ಟಿ ಸ್ತ್ರೀಗೆ ಸಮಾಜ ನ್ಯಾಯದ ಮೂಲಕ ಹಿತವನ್ನುಂಟುಮಾಡಬೇಕೆಂದು ಬಗೆಯುವುದಾದರೆ ಈಗ ಬಡೋದೆಯಲ್ಲಿ ಪ್ರಚಾರದಲ್ಲಿರುವಂತೆ 'ದಾಂಪತ್ಯವಿಚ್ಛೇದನ' ಪದ್ಧತಿಯನ್ನು ಜಾರಿಯಲ್ಲಿ ತರಬೇಕು.

ಸ್ತ್ರೀಯು ವ್ಯಭಿಚಾರಿಣಿಯಾಗಬೇಕಾದರೆ — ವೇಶ್ಯಾವೃತ್ತಿಯನ್ನವಲಂಬಿಸಬೇಕಾದರೆ ಎರಡೇ ಕಾರಣಗಳು ಆಶೆ ಮತ್ತು ದಾರಿದ್ರ್ಯ!! ತನ್ನ ಆಶೆಗೆ ತಕ್ಕ ಜೀವನವನ್ನು ಪತಿಯು ಒದಗಿಸಲಾರ ಎಂಬ ಅತೃಪ್ತಿಯಿಂದ ಅದು ಎಲ್ಲಿ ದೊರೆಯುವುದೋ ಅಲ್ಲಿ ಭೃಂಗವೃತ್ತಿಯನ್ನವಲಂಬಿಸುವುದು. ಇದು ಗೃಹಸ್ಥರೆನಿಸಿಕೊಂಡಿರುವ ವೇಶ್ಯೆಯರ ಪಾಡು. ಜೀವನದ ಯಾವ ಸುಖವನ್ನೂ ಉಪಭೋಗ ಮಾಡದಿರುವ ಬಾಲ ವಿಧವೆಯರನ್ನು ಬಲವಂತದಿಂದ ಸನ್ಯಾಸವೃತ್ತಿಗೆ ತಳ್ಳುವುದು. ಇದರಿಂದ ಸಮಾಜದ ಸುವ್ಯವಸ್ಥೆಗೆ ಯಾವ ಧಕ್ಕೆ ತಗಲುತ್ತದೆ ಎಂಬುದನ್ನು ಕಟುಧರ್ಮಿಗಳು ಕಾಣರು. ಮೊದಲನೆಯದಾಗಿ ಜೀವನದ ಕರೆಗೆ ಕಿವಿಗೊಟ್ಟು ನಿಸರ್ಗಧರ್ಮವಿರುದ್ಧವಾಗಿ ತಮ್ಮ ಮೇಲೆ ಹೊರಿಸಲ್ಪಟ್ಟ ಸನ್ಯಾಸವನ್ನು ಹೊರತಳ್ಳಿ ಗುಪ್ತವಾಗಿ ವ್ಯಭಿಚಾರವನ್ನು ಆಚರಿಸುವುದು. ಎರಡನೆಯದಾಗಿ ವಿಧವೆಯರ ವಿವಾಹಕ್ಕೆ ಅನುಮತಿ ಕೊಡುವ ಕ್ರಿಸ್ತ ಮಹಮ್ಮದೀಯ ಮತಗಳನ್ನು ಅನುಸರಿಸಿ 'ಮತಾಂತರ' ಹೊಂದುವುದು. ಉತ್ತರ ಹಿಂದೂಸ್ಥಾನದಲ್ಲಿ ಈ ರೂಪದ ಬೃಹದಾಕಾರವನ್ನು ಕಾಣಬಹುದು. ಸಮಾಜ ಪುನರ್ವಿವಾಹವಾಗಲಿಚ್ಛಿಸುವ ತರುಣಿಗೆ ಇತರ ಸ್ತ್ರೀಯರಿಗೆ ಕೊಡುವ ಸ್ಥಾನವನ್ನೇ ಕೊಡಬೇಕು ಆಕೆ ಯೋಗ್ಯನಾದ ಒಬ್ಬನ ಕೈಹಿಡಿದು ಸಮಾಜಕ್ಕೆ ತಿಲಕಪ್ರಾಯಳಾಗುವಂತೆ ಹುರಿದುಂಬಿಸಿ ಆ ಮೂಲಕ ಮಿಕ್ಕ ವಿಡಂಬನೆಗಳ ಬಾಗಿಲುಗಳನ್ನು ಮುಚ್ಚಬೇಕು. ಹೊಟ್ಟೆಗಿಲ್ಲದೆ ಇದೇ ಸುಲಭವಾದ ಮಾರ್ಗವೆಂದು ವೇಶ್ಯಾವೃತ್ತಿಯನ್ನವಲಂಬಿಸುವುದು.

ವೇಶ್ಯಾಜೀವನದ ಸಮಸ್ಯೆ ಬಹು ಘೋರವಾದ ಪ್ರಶ್ನೆಯಾಗಿದೆ. ಯೂನಿವರ್ಸಲ್ ವಿಶ್ವಕೋಶದ ಸಂಪಾದಕರು 'ವೇಶ್ಯಾವೃತ್ತಿ ಎಲ್ಲಾ ದೇಶಗಳಲ್ಲಿ ಎಲ್ಲಾ ಕಾಲಗಳಲ್ಲಿಯೂ ಇತ್ತು. ಅದನ್ನು ನಿರ್ಮೂಲಗೊಳಿಸಲು ಮಠ ಮತ್ತು ಸರ್ಕಾರಗಳು ಮಾಡಿದ ಪ್ರಯತ್ನವೆಲ್ಲಾ ನಿಷ್ಫಲವಾದವು. ಇಂದು ಸಂಯುಕ್ತರಾಜ್ಯ ಅದನ್ನು ನ್ಯಾಯವಿರುದ್ಧ ಆಚಾರವೆಂದು ಪರಿಗಣಿಸಿ ಶಿಕ್ಷಿಸುತ್ತದೆ; ಆದರೆ ಹಾಗೆ ಸಾಕ್ಷಿಭೂತವಾಗಿ ನಿರ್ಧರಿಸುವುದು ತಾನೆ ಕಷ್ಟ. ವೇಶ್ಯಾವೃತ್ತಿಯು ಅಬಾಧಿತವಾಗಿ ವರ್ಧಿಸುತ್ತದೆ. ಫ್ರಾನ್ಸ್ ಮತ್ತು ಇತರ ದೇಶಗಳಲ್ಲಿ ಕೆಲವು ನಿಯಮಗಳಿಂದ ಇದನ್ನು ಬಿಗಿ ಹಿಡಿದಿದ್ದಾರೆ' ಎಂದು ಹೇಳುತ್ತಾರೆ. ಮುಂಬಯಿ, ಕಲ್ಕತ್ತಾ ಮೊದಲಾದ ಸರ್ಕಾರದವರು ನಮ್ಮಲ್ಲಿಯೂ ಕೆಲವು ನಿರ್ಬಂಧಗಳಿಂದ ಇದನ್ನು ಬಿಗಿಹಿಡಿಯಲೆತ್ನಿಸಿದ್ದಾರೆ. ಆದರೆ ಇದು ಎಷ್ಟರಮಟ್ಟಿಗೆ ಸಾಧ್ಯ ಎಂಬುದನ್ನು ನೋಡಬೇಕು. ಜಗತ್ತಿನಲ್ಲಿ ಸಾರ್ವತ್ರಿಕವಾಗಿ ಹರಡಿರುವ—ಅದರಲ್ಲಿಯೂ ಈಚೆಗೆ ವಿಶೇಷ ಪ್ರವರ್ಧಿಸಿರುವ—ಈ ದುರ್ವ್ಯಸನಕ್ಕೆ ಕಳೆದ ಘೋರಯುದ್ಧವೇ ಕಾರಣವೆಂದು ಇತಿಹಾಸಕಾರರು ಹೇಳುತ್ತಾರೆ. ಆ ಕಾರಣವನ್ನು ನಮ್ಮ ದೇಶದ ಪರಿಸ್ಥಿತಿ ಒಪ್ಪಲಿ ಒಪ್ಪದಿರಲಿ ನಮ್ಮಲ್ಲಿಯೂ ಸಮಸ್ಯೆ ಅಷ್ಟೇ ತೀಕ್ಷ್ಣವಾಗಿದೆ. ಒಂದು ಕಾಲದಲ್ಲಿ ನಮ್ಮಲ್ಲಿ ಕುಲೀನ ಸ್ತ್ರೀಗಿಂತಲೂ ವೇಶ್ಯೆಗೆ ಹೆಚ್ಚು ಗೌರವವಿತ್ತು. ಪ್ರತಿಯೊಂದು ದೇವಸ್ಥಾನವೂ ವೇಶ್ಯಾತಂಡನವನ್ನೇ ಲಾಂಛನವಾಗಿಟ್ಟುಕೊಂಡು ಪೋಷಿಸುತ್ತಿತ್ತು. ಯಾವಕಾಲದಲ್ಲಿ ಇದಕ್ಕೆ ಮರ್ಯಾದೆ ಕೊಟ್ಟಿದ್ದರೂ ವೃತ್ತಿ ಮಾನವ್ಯಕ್ಕೇ ಅಪಮಾನವನ್ನೆಸಗುವಂತಹುದೆಂದು ಎಲ್ಲರೂ ಒಪ್ಪಲೇಬೇಕು. ಜಗತ್ತಿನ ಅನೇಕ ದುರ್ವ್ಯಸನಗಳು ಹೇಗೆ ದಾರಿದ್ರ್ಯದ ಶಿಶುಗಳೋ ವೇಶ್ಯಾವೃತ್ತಿಯೂ ಹಾಗೇ ಅದರ ಶಿಶುವಾಗಿದೆ.* ಜೀವನದ ಪ್ರಮೇಯ ತಮ್ಮ ಮುಂದಿಲ್ಲದ ಪಕ್ಷಕ್ಕೆ ಶೇಕಡ ೯೦ ಮಂದಿ ವೇಶ್ಯಾವೃತ್ತಿಯನ್ನು ಸಂತೋಷವಾಗಿ ಬಿಟ್ಟುಬಿಡುವರು. ಆದರೆ ಅದಕ್ಕೆ ಮುಂಚೆ ಅವರನ್ನು ಮಾಯೆಯಂತೆ ಬಳಸುವ ಅನುಚಾನವಾಗಿ ಬಂದ ಪದ್ಧತಿಯ

* ಈ ಬಗ್ಗೆ ಹೆಚ್ಚು ತಿಳಿಯಬೇಕೆನ್ನುವರು "Road to Buenos Ayres" By Andre Londres ಮತ್ತು "A Terrible Life" By Basil Tozer ಎಂಬ ಎರಡು ಪುಸ್ತಕಗಳನ್ನೋದಬಹುದು.

ಶೃಂಖಲೆಯನ್ನು ಮುರಿಯಬೇಕು. ವೇಶ್ಯೆಯ ಮಗಳೂ ವೇಶ್ಯೆಯೇ ಆಗಿರಬೇಕೆಂದು ಆಕೆಯ ಸಮಾಜ ವಿಧಾಯಕಮಾಡಿಬಿಡುತ್ತದೆ. ಹೀಗೆ ವಿಷಪೀಳಿಗೆ ಅವಿಚ್ಛಿನ್ನವಾಗಿ ಸಾಗುತ್ತದೆ. ಸಮಾಜ ವೇಶ್ಯೆಯನ್ನು ಕೇವಲ ಭೋಗದ ಹೆಣ್ಣೆಂದು ಭಾವಿಸಿರುವುದರಿಂದ ಅವಳು ಈ ಮಾಯಾ ಚಕ್ರಬಂಧನವನ್ನು ಹೇಗೆ ಬಿಟ್ಟು ಹೊರಗೆ ಬರಬಲ್ಲಳು. ಸಮಾಜ ವೇಶ್ಯೆಯನ್ನು ವೇಶ್ಯೆಯನ್ನಾಗಿಯೇ ಇಟ್ಟು, ಅವಳು ಯಾವದೇ ರೀತಿಯಿಂದಲೂ ಆ ವಿಷಕೂಪದಿಂದ ಹೊರಬರದಿರುವಂತೆ ಮಾಡುವುದಕ್ಕೆ ಕಾರಣವನ್ನು ಲೆಕಿ (Lecky) ಎಂಬ ಇತಿಹಾಸಕಾರ ಬಹಳ ಸೂಕ್ಷ್ಮವಾಗಿ ನಿರೂಪಿಸಿರುತ್ತಾನೆ. ಕುಲೀನ ಸ್ತ್ರೀಯರು ಭದ್ರಸ್ಥಾನದಲ್ಲಿರಬೇಕಾದರೆ ವೇಶ್ಯೆಯರಿರಬೇಕೆಂದು ಅವನ ಮತ. ಅವಿವಾಹಿತರಾದ ತರುಣರ, ಅತಿಕಾಮಿಗಳಾದ ಪುರುಷರ ಮತ್ತು ಕಾರಣಾಂತರಗಳಿಂದ ಸ್ವಸ್ತ್ರೀಯನ್ನೊಲ್ಲದವರ ಹಾವಳಿ ಕುಲೀನಸ್ತ್ರೀಯರ ಕಡೆ ತಿರುಗದಿರುವಂತೆ ಸಮಾಜವನ್ನು ಆದರ ನೀತಿಯನ್ನೂ ರಕ್ಷಿಸುವರಿವರು ಎಂದು ಆತನ ಮತ. ವೇಶ್ಯಾವೃತ್ತಿಯನ್ನು ಯಾವದೇ ರೀತಿಯಿಂದ ಒಪ್ಪುವವರೂ ಆ ಸಂಸ್ಥೆಯಿಂದ ರಾಷ್ಟ್ರದ ಸ್ತ್ರೀಪುರುಷರ ಆರೋಗ್ಯಕ್ಕೂ, ಆ ಮೂಲಕ ಮಾನಸಿಕ ಪ್ರಗತಿಗೂ ಆಗುವ ಹಾನಿಯನ್ನು ವಿರೋಧಿಸಲಾರರು. ಭಯಂಕರ ರೋಗಗಳನ್ನು ಜನಾಂಗಕ್ಕೆ ಹಂಚಿ ಅದರ ಭವಿಷತ್ತು ಕೂಪದಲ್ಲಿ ಬೀಳುವಂತೆ ಈ ವೃತ್ತಿ ಮಾಡುತ್ತಿದೆ. ಆದರೆ ತಪ್ಪು ಯಾರದು ? ವೃತ್ತಿಯನ್ನು ಅವಲಂಬಿಸಿರುವವರದೇ—ಅವರಿಗೆ ಆ ಜೀವನವನ್ನು ನಡೆಸಲು ಪ್ರೋತ್ಸಾಹ ಕೊಡುವ ರಸಿಕರದೇ ? ಸ್ತ್ರೀ ತನ್ನ ಸ್ತ್ರೀತ್ವವನ್ನು ಸುಲಿದುಕೊಂಡು ಜೀವಿಸಬೇಕೇ ವಿನಃ ಬೇರೆ ಯಾವ ರೀತಿಯಲ್ಲಿ ಬದುಕಲೂ ಮಾರ್ಗವೇ ಇಲ್ಲ. ಶಾಲಾ ಶಿಕ್ಷಿಕೆಯರಾಗಿಯೂ, ಆಸ್ಪತ್ರೆಗಳ ನರ್ಸುಗಳಾಗಿಯೂ, ಇರುವ ಸ್ತ್ರೀಯರ ಜೀವನಗಳನ್ನು ಪೃಥಕ್ಕರಿಸಿ ನೋಡಬಹುದು. ಗಂಡಸು ಹೇಗೆ ತನ್ನ 'ಗಂಡಸುತನ'ವನ್ನು ಮಾರಿಕೊಂಡು ಜೀವಿಸಬೇಕಿಲ್ಲವೋ ಹಾಗೆ ಹೆಂಗಸು ತನ್ನ 'ಹೆಣ್ಣುತನವನ್ನು' ಮಾರಿಕೊಂಡು ಬಾಳಬೇಕಿಲ್ಲವೆಂಬ ಸುಧಾರಣೆ ಬಂದಾಗ—ಈ ವೃತ್ತಿ ತಾನೇ ತಾನಾಗಿ ಅದೃಶ್ಯವಾಗುವುದು. ಗಂಡಸಿನಂತೆ ಹೆಂಗಸೂ ಗಾನ, ಸಾಹಿತ್ಯ, ಚಿತ್ರಕಲೆ, ಶಿಕ್ಷಣಪ್ರಸಾರ, ವೈದ್ಯಕೀವೃತ್ತಿ ಮತ್ತೆ ತನ್ನ ದೇಹಶಕ್ತಿಗೆ ಅನುಗುಣವಾದ ಯಾವದೇ ವೃತ್ತಿಯನ್ನು

ಅನುಸರಿಸಿ ಜೀವಿಸಬಹುದು. ಹೆಂಗಸು ಹೆಂಗಸಾದ ಕಾರಣ ಅವಳು ಜೀವನೋಪಾಯದ ಹಲವು ನ್ಯಾಯಮಾರ್ಗಗಳನ್ನು ಅನುಸರಿಸದಂತೆ ಮಾಡುವುದು ಯಾವ ನ್ಯಾಯ? ಅವಕಾಶ, ಅನುಕೂಲ, ಸಹಾನುಭೂತಿ ದೊರೆತಲ್ಲಿ ಪ್ರತಿಯೊಂದು ರಂಗದಲ್ಲಿಯೂ ಸ್ತ್ರೀ ಪುರುಷನನ್ನು ಪ್ರತಿಸ್ಪರ್ಧಿಸ ಬಲ್ಲಳು.

ವೃತ್ತಿಯನ್ನು ತುಚ್ಛವಾಗಿ ನಾವು ಕಾಣಬಹುದೇ ವಿನಾ ವೃತ್ತಿಕಾರರ ನಲ್ಲ. ಮಹಾನುಭಾವ ಯೇಸು, ಮೇರಿ ಮಾಗ್ಡಲೀನಾ ಎಂಬ ವೇಶ್ಯೆಯನ್ನು ಶಿಕ್ಷಿಸಬೇಕೆಂದು ಬಂದ ಕುಪಿತ ಜನಸ್ತೋಮಕ್ಕೆ ಹೇಳಿದಂತೆ 'ನಿಮ್ಮಲ್ಲಿ ನಿರ್ದೋಷಿಗಳಾದವರು ಈಕೆಯ ಮೇಲೆ ಮೊದಲನೆಯ ಕಲ್ಲನ್ನೆಸೆಯಿರಿ' ಎಂದು ಹೇಳಬೇಕಾಗುತ್ತದೆ.

ಈ ಸಂದರ್ಭದಲ್ಲಿಯೇ ಜಾತಿನಿಷ್ಠತೆಯ ವಿಚಾರ ಒಂದು ಮಾತು ಹೇಳ ಬೇಕಾಗಿದೆ. ಹೆಣ್ಣು, ವೇಶ್ಯೆಯಾಗಿ ಬಂದರೆ ಯಾವ ಜಾತಿಗೆ ಸೇರಿದ್ದರೂ ಚಿಂತೆಯಿಲ್ಲ. ಆದರೆ ವಿವಾಹಕ್ಕಾದರೆ ಸ್ವಜಾತಿಯ ಹೆಣ್ಣೇಬೇಕು ಮಾನ ವನ ಅನಂತ ಕ್ರೌರ್ಯಕ್ರಿಯೆಗಳಲ್ಲಿ ಇದೂ ಒಂದು. ಸ್ತ್ರೀ ಪುರುಷನ ಜೀವನದ ಸಾರ್ವತ್ರಿಕ ಪೂರ್ಣತೆಗೆ ಇಂಬುಗೊಡುವ ಪ್ರಧಾನಶಕ್ತಿಯೆಂಬ ಕಲ್ಪನೆ ಬಂದರೆ ಈ ಜಾತಿಮತಗಳ ಕಟ್ಟೆಲ್ಲವೂ ಪುಡಿಗುಟ್ಟಿಹೋಗುವವು. ಪವಿತ್ರವಾದ ಪ್ರೇಮ ಹೇಗೆ ಬ್ರಾಹ್ಮಣ ವಟುವಿಗೆ ಶೂದ್ರ ಸ್ತ್ರೀಯನ್ನು ಶೂದ್ರ ತರುಣನಿಗೆ ಬ್ರಾಹ್ಮಣ ಕನ್ಯೆಯನ್ನೂ ಕೂಡಿಸುತ್ತದೆ ಎನ್ನುವುದಕ್ಕೆ ಬಂಗಾಳದ ಚಂಡಿದಾಸ ಕವಿಯ ಜೀವನಚರಿತ್ರೆಯೂ ಕರ್ಣಾಟಕದ ಮಧುವರಸ, ಹರಳಯ್ಯ ಇವರ ಮಕ್ಕಳ ವೃತ್ತಾಂತವೂ ಸಾಕ್ಷ್ಯಗಳಾಗಿವೆ. ಜಗನ್ನಾಥದಾಸ ಪಂಡಿತರಂತಹ ಕರ್ಮನಿಷ್ಠ ಬ್ರಾಹ್ಮಣ ಕವಿಗಳು ಲವಂಗೀಯೆಂಬ ಯವನ ಯುವತಿಯನ್ನು ವರಿಸಿದ ಕತೆ ಇತಿಹಾಸ ಪ್ರಸಿದ್ಧವಾಗಿದೆ. ಜಾತಿಮತಗಳು ಮಾನವನು ಮೊದಲು ಸೌಕರ್ಯಕ್ಕೆ ಸ್ಥಾಪಿಸಿಕೊಂಡ ಸಂಸ್ಥೆಗಳು. ಈಗ ಅವುಗಳಿಗೆ ಸ್ಥಾನವಿಲ್ಲ. ಅವುಗಳ ಕಾಲವಾಯಿತು—ಆಯುಸ್ಸು ಮುಗಿಯಿತು. ಬಸವಣ್ಣನವರ ಕಾಲಕ್ಕೇ ಮುಗಿಯಬೇಕಾಗಿತ್ತು. ಆದರೆ ಅಜ್ಞಾನ ಎಂದಿನವರೆಗಿದೆ ಅಂದಿನ ವರೆಗೆ ಜಾತಿಮತಗಳ ಭಿನ್ನ ಜಗಳಗಳು ಇರುವವೆಂದು ಕಾಣುತ್ತದೆ.

ಅನೇಕಸಲ ಸಮಾಜದ ಮೌಢ್ಯ ವ್ಯಕ್ತಿಗಳನ್ನು ಈ ವೃತ್ತಿಗೆ ಇಳಿಸುತ್ತದೆ. ಒಮ್ಮೆ ತಪ್ಪಿನಡೆದ ಹೆಂಗಸಿನ ಮೇಲೆ ದೋಷದ ಹೊರೆಯನ್ನು ಹೊರಸಿ ಸಮಾಜ ಅವಳ ಕೈಗೆ ಹಳದಿ ನಿಶಾನಿಯನ್ನಿತ್ತು ಬಿಡುತ್ತದೆ. ಸಮಾಜಕ್ಕೆ ಮೊದಲು ಹೃದಯ ಬೆಳೆಯಬೇಕು. ಸಣ್ಣ ಪುಟ್ಟ ದೋಷಗಳನ್ನು ಕ್ಷಮಿಸಿ ದೋಷಿಗಳು ಶುದ್ಧವಾದ ಜೀವನವನ್ನು ನಡೆಸಲು ಸಹಾಯಮಾಡಬೇಕು. ತಾನು ವ್ಯಕ್ತಿಗಳ ನಡತೆಯನ್ನೇ ಸೂಕ್ಷ್ಮವಾಗಿ ನೋಡುತ್ತಾ ಅವರ ಮೇಲೆ ನ್ಯಾಯ ವಿಮರ್ಶೆಗೆ ಕುಳಿತುಕೊಳ್ಳುವ ನ್ಯಾಯಾಧೀಶ ಎಂಬುದನ್ನು ಮರೆತು ಅವರ ಜೀವನಗಳನ್ನು ಎತ್ತಿ ಉತ್ತಮ ರೀತಿಯಲ್ಲಿ ಕಟ್ಟುವ ಶಿಲ್ಪಿ ಎಂದು ಅರಿತುಕೊಳ್ಳಬೇಕು.

ವ್ಯಕ್ತಿಗಳನ್ನು ಅಳೆಯಬೇಕಾದರೆ ಕೇವಲ ನೀತಿಯ ಮಾನದಂಡವನ್ನೇ ಸಮಾಜ ಧರಿಸುವುದರಲ್ಲಿ ಅರ್ಥವಿಲ್ಲ. ಸಾಮಾನ್ಯ ನಡೆವಳಿಕೆಗೆ, ಸಾಮಾನ್ಯ ನೀತಿ ರೀತಿಗಳಿಗೆ, ಸಾಮಾನ್ಯ ದೃಷ್ಟಿಕೋನಕ್ಕೆ ಷೆಲ್ಲಿಯ ನೀತಿ, ರತ್ನಾಕರ ವರ್ಣಿಯ ನೀತಿ, ಆಸ್ಕರ್ ವೈಲ್ಡನ ನೀತಿ ದೋಷಗಳಾಗಬಹುದು. ಯಾವ ದಾದರೊಂದು ರಂಗದಲ್ಲಿ ಮುಂದುವರಿದು ಸಾಮಾನ್ಯದ ಮೇಲೆ ತಲೆಯೆತ್ತಿ ಬಾಳುವವನು ನೀಷೆಯಂತೆ (Nietzsche) ಹುಚ್ಚನಾಗಿರಬಹುದು, ಬೀಥೊವನ್ನನಂತೆ ಏಕಾಂತವಾಸಿಯಾಗಿರಬಹುದು, ಗಾಬ್ರಿಯಲ್ ಡಿ ಅನನ್‌ಜಿಯೋವಿನಂತೆ ವ್ಯಭಿಚಾರಿಯಾಗಿರಬಹುದು. ಅಸಾಮಾನ್ಯ ಕೃತಿಗಳನ್ನು ಮಾಡುವವನ ಮನಸ್ಸಿನ ಸ್ಥಿತಿಗತಿಯು ಈ ರೂಢಿ ಶೃಂಖಲೆಗಳನ್ನು ಕಿತ್ತೊಗೆದೇ ತನ್ನ ಕಾರ್ಯಕ್ಕೆ ತೊಡಗಿರುತ್ತದೆ. ಪ್ರತಿಯೊಬ್ಬ ಮಾನವನಿಗೂ ಅಂತಹ ಸನ್ನಿವೇಶಗಳೊದಗುತ್ತವೆ. ಜೀವನದ ವಿಲೋಭನೆಗಳ ಪರೀಕ್ಷೆಗಳನ್ನು ಗೆದ್ದುಬರುವ ತಾಪಸಿಗಳು ಬಹುವಿರಳ. ಬಹಳ ಸಲ 'ನೀತಿ–ನೀತಿ' ಯೆಂದು ಡಂಗುರ ಸಾರುವವರಿಗಿಂತಲೂ ತುಚ್ಛವಾದ ಜೀವನಗಳನ್ನು ನಡೆಸಿರುವವರು ಸಿಕ್ಕುವುದು ದುರ್ಲಭವಾಗುತ್ತದೆ. ಐಸೊಡೋರಾ ಡಂಕನ್ ಎಂಬ ಕಲಾವಿದೆಯು ಹೇಳುವಂತೆ

'Virtuous people are simply those who have either not been tempted sufficiently, because their purposes are so concentrated

in one direction that they have not had leisure to glance around them.'

ಮನುಷ್ಯಪ್ರಾಣಿ ಸಂಪರ್ಕವಿಲ್ಲದ ಗೊಂಡಾರಣ್ಯಕ್ಕೋ ಹಿಮಾಲಯದ ತಪ್ಪಲಿಗೋ ಹೋಗಿ ಮೂಗು ಹಿಡಿದುಕೊಂಡು 'ನಾನು ಸನ್ಯಾಸಿ, ನೀತಿಪರ' ಎಂದು ಹೇಳಿಕೊಳ್ಳುವುದು ಸುಲಭ. ಆದರೆ ಭಗವಾನ್ ರಾಮಕೃಷ್ಣರಂತೆ ವೇಶ್ಯಾಸಮೂಹದ ಮಧ್ಯೆಯಿದ್ದು ಅವರಲ್ಲಿ ತಾಯ್ತನವನ್ನು ಕಾಣುವುದು ಬಹಳ ಕಷ್ಟ. ನಮ್ಮ ಸಮಾಜದಲ್ಲಿ ಕಾಣಬರುತ್ತಿರುವ ನೀತಿಯ ವಾದ ಕೇವಲ ಈ ಬಗೆಯ ವಿಡಂಬನ. **ನೀತಿ ಶಕ್ತನ ಆಯುಧವಾಗಬೇಕಲ್ಲದೆ ದುರ್ಬಲನ ಆಶ್ರಯವಾಗಬಾರದು.** ಇದು ಪರಹಿಂಸೆಯಲ್ಲಿ ಕೊನೆಗಾಣುತ್ತದೆ. ನಮ್ಮ ಮಠಗಳಷ್ಟು ನೀತಿಬೋಧಿಸುವ ಸಂಸ್ಥೆಗಳು ಬೇರೆಯಿಲ್ಲ, ಆದರವುಗಳಷ್ಟು ದುಷ್ಟಜೀವನವನ್ನು ನಡೆಸುವ ಸಂಸ್ಥೆಗಳೂ ಬೇರೆಯಿಲ್ಲ. ಧರ್ಮಾಗಾರಗಳೆನಿಸಿಕೊಂಡಿದ್ದ ನಮ್ಮ ಮಠಗಳು ಇಂದು ಕೇವಲ ಪಾಪಕೂಪಗಳಾಗಿವೆ. ಅವುಗಳನ್ನು ಗುರುಸ್ಥಾನಗಳೆಂದು ಒಪ್ಪಿಕೊಳ್ಳುವವರ ನೀತಿಯ ಮಟ್ಟವಾದರೂ ಎಷ್ಟಿರಬಹುದು !

ಅಂತಃಕರಣ, ಪ್ರೇಮ, ಸಹನೆಗಳೇ ಸಮಾಜವನ್ನು ಮುಂದಕ್ಕೆ ನಡೆಸುವ ನಕ್ಷತ್ರಗಳಾಗಬೇಕು. ಜನಾಂಗದ ಪ್ರಗತಿಯ ದೃಷ್ಟಿಯಲ್ಲಿ ವ್ಯಕ್ತಿಯ ನಡತೆ ಅಷ್ಟು ಪ್ರಧಾನವಾದದ್ದಲ್ಲ. ವ್ಯಕ್ತಿಯು ಅಲ್‌ಕೆಪಾನಿನಂತೆ ಸಮಾಜ ರಕ್ತೋಪಜೀವಿಯಾದರೆ ಮಾತ್ರ ಅವನನ್ನು ಶಾಸನಮಾಡುವ ಅಧಿಕಾರ ಸಮಾಜಕ್ಕುಂಟು. ಇಂತಹ ಸಂಕಷ್ಟಗಳಿಗೆ ನ್ಯಾಯಾಸ್ಥಾನಗಳಿವೆ, ಜೈಲುಗಳಿವೆ. ಪೋಲೀಸಿನವರಿದ್ದಾರೆ!! ಆದರೆ ವ್ಯಕ್ತಿಗೆ ಸಂಬಂಧಪಟ್ಟ—ಸಮಾಜದ ಪ್ರಗತಿಗೆ ಯಾವದೂ ರೀತಿಯಲ್ಲಿ ಹಾನಿಯನ್ನೆಸಗದೆ ನಡತೆಯನ್ನು ಮಹಾಪರಾಧವೆಂದು ಭಾವಿಸಿ ಶಾಸನ ಮಾಡುವುದು ಸಮಾಜದ ತಪ್ಪುನಡತೆ. ಈ ಅಧಿಕಾರ ಸಮಾಜಕ್ಕಿಲ್ಲ. ಸಮಾಜವು ತನ್ನ ಅಸಹನೆ, ಅಜ್ಞಾನಗಳಿಂದ ಭಿನ್ನಾಭಿಪ್ರಾಯಗಳನ್ನು ವ್ಯಕ್ತಮಾಡಿದ ಅನೇಕ ಮಹನೀಯರ ಜೀವನಗಳನ್ನು ಉಪಟಳಗೊಳಿಸಿದೆ. ಬ್ರೂನೋ, ವಾಲ್ಟೇರ್, ಪೇನ್, ಮನ್‌ಸೂರ್, ಬ್ರಾಡ್‌ಲಾ, ಇಂಗರ್ಸಾಲ್ ಇವರುಗಳ ಜೀವನವೇ ಸಾಕ್ಷಿ. ಆಚರಣೆಯಲ್ಲಿ ಬಂದಿರುವ ವ್ಯವಹಾರವನ್ನು ಉತ್ತಮಗೊಳಿಸಲು ಮುಂದೆ ಬರುವವರು

ಸಾಮಾನ್ಯವಾಗಿ ಹಲವು ತೊಂದರೆಗಳಿಗೀಡಾಗಲೇ ಬೇಕು. ಅವರ ಮಾನ, ಜೀವನಗಳು ಮಾತ್ರವಲ್ಲದೆ ಪ್ರಾಣವೂ ಅನೇಕ ಸಲ ಎರವಾಗಬೇಕಾಗುತ್ತವೆ. ಅಂತಹ ಸಮಯಗಳಲ್ಲಿ ಜನತೆಯ ಕ್ರೋಧ ವ್ಯಕ್ತಿಯ ಮೇಲೆ ತಿರುಗ ಬೇಕಾದರೆ ಆಶ್ರಯಿಸುವ ಮಹಾಸ್ತ್ರವೆಂದರೆ—ನೀತಿ! ಪ್ರಗತಿಯನ್ನು ಅಡ್ಡ ಗಟ್ಟಿ, ಸತ್ವಶಾಲಿಗಳ ತೇಜೋಭಂಗವನ್ನು ಮಾಡಿ, ಸಮಾಜ ರೂಢಿಯ ಅನಾಚಾರದಲ್ಲಿ ಬೆಳೆಯಲು ಸಹಾಯ ಮಾಡುತ್ತಿರುವುದು ನೀತಿರಕ್ಷಣೆಯ ಕುಂಟುನೆಪ.

ನೀತಿಯನ್ನು ನಿಜವಾಗಿಯೂ ರಕ್ಷಿಸಬಹುದೇ-ರಕ್ಷಿಸಲು ಸಾಧ್ಯವೇ ?- ಹೀಗೆ ಅದು ಪರಾಶ್ರಿತ ಭಾವವಾಗಿದ್ದಲ್ಲಿ ಇಷ್ಟುದಿನ ಉಳಿಯುತ್ತಿದ್ದಿತೇ ? ಕಾಲ ಕಾಲಕ್ಕೆ, ಯುಗಯುಗಕ್ಕೆ, ವರ್ಷವರ್ಷಕ್ಕೆ ನೀತಿಕಲ್ಪನೆ ಬದಲಾಯಿಸುತ್ತಿದೆ. ನಮ್ಮಲ್ಲಿ ಗಂಡು ಹೆಣ್ಣಿನ ಮುಖ ನೋಡುವುದು ಅನೀತಿಯಾಗಿದ್ದರೆ ಅಮೇರಿಕೆ ಯಲ್ಲಿ ಗಂಡು ಹೆಣ್ಣಿನೊಂದಿಗೆ ಕೆಲವು ವರ್ಷ ವಿವಾಹವಿಲ್ಲದೆ ಸಂಸಾರ ಮಾಡಿ ಕೊಂಡಿದ್ದರೂ ತಪ್ಪಿಲ್ಲ.* ನಮ್ಮಲ್ಲಿಯೇ ಮೊದಲು ಹೆಂಗಸು ಐವರು ಗಂಡಂದಿ ರನ್ನು ಕೂಡಿದರೆ, ಪುರುಷನು ೧೬ ಸಹಸ್ರ ಸ್ತ್ರೀಯರನ್ನು ವಿವಾಹಿತನಾದರೆ ತಪ್ಪಾಗಿರಲಿಲ್ಲ-ಈಗ....? ಸಮಾಜ ತನ್ನ ಸುವ್ಯವಸ್ಥೆಗೆ ಭಂಗತಾರದ ವ್ಯಕ್ತಿ ಯಾವ ರೀತಿಯಲ್ಲಿ ನಡೆದುಕೊಂಡರೂ ಸುಮ್ಮನಿರುವುದು ಶ್ರೇಯಸ್ಕರ.

ಇಷ್ಟರವರೆಗೆ ಸಮಾಜವೆಂಬ ಒಂದು ವ್ಯವಸ್ಥಿತ ಸಂಸ್ಥೆಯಿದೆಯೆಂಬ ಕಲ್ಪನೆಯನ್ನು ಮುಂದಿಟ್ಟುಕೊಂಡೇ ಚರ್ಚಿಸಿದ್ದಾಯಿತು. ಜೀವಂತ ಸಂಸ್ಕೃತಿ ಯನ್ನು ಯಾವದು ಪೋಷಿಸಿ ಬೆಳೆಸುವುದೋ ಅದನ್ನೇ ಸಮಾಜವೆಂದು ವಿಚಾರಶೀಲರು ಒಪ್ಪಿಕೊಂಡಿರುವುದು. ನಮ್ಮಲ್ಲಿ ನಿಜವಾದ ಸಮಾಜ ಎಲ್ಲಿದೆ ? ಎಂದು ದೇಶದಲ್ಲಿ ಧರ್ಮ ಭಿನ್ನಭಿನ್ನವಾಗಿ ಮತಗಳಾಗಿ ಹೋಯಿತೋ ಆಗಲೇ ಸಮಾಜಶಬ್ದವೂ ಕೊನೆಗಂಡಿತು ಎಂದು ತಿಳಿಯ ಬಹುದು. ಎಷ್ಟು ಮತಗಳು—ಎಷ್ಟು ಮತಾಂತರಗಳು—ಎಷ್ಟು ಭಾಗ ವಿಭಾಗಗಳೂ !! ಯಾವ ವಿಚಾರದಲ್ಲಿಯೂ ನಮ್ಮಲ್ಲಿ ಐಕ್ಯತೆಯಿಲ್ಲ. ಒಮ್ಮುಖವಾದ ಅಭಿಪ್ರಾಯವಿಲ್ಲ. ಮತಗಳ ಪ್ರಾಬಲ್ಯಕ್ಕೆ ನಾವು ಎಡೆ ಕೊಟ್ಟಂದಿನಿಂದ ಇದ್ದ ಅಲ್ಪಸ್ವಲ್ಪ ಐಕಮತ್ಯವೂ ನಾಶವಾಯಿತು. ಪರಸ್ಪರ

---

*Trial marriage as advanced by Judge Ben Lindsey.

ವೈಷಮ್ಯ, ಈರ್ಷ್ಯೆ, ತುಚ್ಛ ಕಲಹಗಳಲ್ಲಿ ನಮ್ಮ ಸಮಾಜ ಯಾದವ ಸಾಮ್ರಾಜ್ಯವಾಗಿ ಹೋಗಿದೆ.

ಇದಕ್ಕೆ ಒಂದೇ ಉಪಾಯ. ನಮಗೆ ಈ ಧರ್ಮವೂ ಬೇಡ—ಈ ಮತಗಳೂ ಬೇಡ—ಈ ಮಠಗಳೂ ಬೇಡ!! ನಾವು ಒಂದು ರಾಷ್ಟ್ರವಾಗಿ, ಒಬ್ಬ ತಾಯಿಯ ಮಕ್ಕಳೆಂಬ ಭಾವನೆಯಿಂದ ಬೆಳೆದರೆ ಸಾಕಾಗಿದೆ. ಇಡೀ ಹಿಂದೂಸ್ತಾನ ಹಿಂದೂ ಧರ್ಮವನ್ನು ಅವಲಂಭಿಸಿದರೂ ಒಂದೇ, ಇಸ್ಲಾಂ ಧರ್ಮವನ್ನು ಅವಲಂಬಿಸಿದರೂ ಒಂದೇ, ಕ್ರಿಸ್ತಧರ್ಮವನ್ನು ಅವಲಂಬಿಸಿದರೂ ಒಂದೇ! ಧರ್ಮಗಳ ಇತಿಹಾಸವನ್ನು ನೋಡಿದವರ ಕಣ್ಣಿಗೆ ನಮ್ಮಲ್ಲಿ ಜಾಬಾಲಿ, ನಚಿಕೇತ, ವಶಿಷ್ಟ, ವಿಶ್ವಾಮಿತ್ರ. ರಾಮ, ಕೃಷ್ಣರು ಹೇಗಿರುವರೋ ಹಾಗೆ ಕ್ರೈಸ್ತರಲ್ಲಿ ಯೇಸು, ಪಾಲ್, ಮೇರಿ; ಮಾರ್ಕ್, ಸೇಂಟ್ ಫ್ರಾನ್ಸಿಸ್, ಸೇಂಟ್ ಬೆರ್ನಾರ್ಡ್, ಮೊದಲಾದ ಮಹಾನುಭಾವರೂ ಮುಸಲ್ಮಾನರಲ್ಲಿ ಮಹಮ್ಮದ್, ಆಲಿ, ಉಸ್ಮಾನ್, ಮನ್ಸೂರ್, ಘುಜಲಿ, ಹಾಫೀಜ್ ರೂಮಿ, ಜಾಮಿ, ಮೊದಲಾದ ಮಹಾನುಭಾವರೂ ಇದ್ದಾರೆ. **ನಮಗಿಂದು ಬೇಕಾಗಿರುವುದು ಸತ್ತಮೇಲೆ ಸ್ವರ್ಗವಲ್ಲ, ಇರುವಾಗ ಸ್ವರ್ಗ! ಇದಕ್ಕೆ ದಾರಿ ಮತವಲ್ಲ, ಮತಗೊಂದಲವಲ್ಲ, ಸ್ನೇಹಪ್ರೇಮಗಳ ಪೋಷಣೆಯಿಂದ ಬೆಳೆದ ವಿಶಾಲವಾದ ಭ್ರಾತೃಭಾವನೆ.**

ಇವೇ ನನ್ನ ಗ್ರಂಥವನ್ನು ಪ್ರೇರೇಪಿಸಿರುವ ಭಾವನೆಗಳು. ಇವು ಈಗ ಪ್ರಚಾರದಲ್ಲಿರುವ ಭಾವನೆಗಳಿಗೂ ಆಚರಣೆಗಳಿಗೂ ಕಲ್ಪನೆಗಳಿಗೂ ಬಹಳ ವಿರುದ್ಧವಾಗಿವೆಯೆಂಬುದನ್ನು ಬಲ್ಲೆ; ಓದುಗರು ಸಾಮಾನ್ಯವಾಗಿ ಏನು ಏನು ಅರ್ಥ—ಅಪಾರ್ಥಗಳನ್ನು ಇದರ ಮೇಲೆ ಕಲ್ಪಿಸಬಹುದೆಂಬುದನ್ನು ಊಹಿಸಲೂ ಬಲ್ಲೆ. ಒಬ್ಬ ಕವಿಯು ಹೇಳುವಂತೆ

"The Newer the innovations
Come to disturb our rest
The older the orations
Delivered in Protest."

ಆ ಪ್ರತಿಕೂಲವಾದ (Protest) ವೆಲ್ಲಾ ತೆಗೆದುಕೊಳ್ಳುವುದು ಒಂದೇ ರೂಪ—ಲೇಖಕನ ನೀತಿಯ ವಿಮರ್ಶೆ—ಲೇಖಕನಿಗೆ ಪಾಪಕೂಪಗಳ ಪರಿ

ಚಯವಿದೆಯೆಂದು ಮುಖಕ್ಕೆ ಮಸಿಬಳಿಯಲೆತ್ನಿಸುವುದು. ನನ್ನ ಗ್ರಂಥವು ಸಮಾಜದ ಕೆಲವು ದೋಷಗಳ, ಆಚಾರಗಳ, ನಡೆವಳಿಕೆಗಳ ಖಂಡನೆಯಲ್ಲದೆ ಯಾವ ವ್ಯಕ್ತಿಯ ಖಂಡನೆಯೂ ಆಗಿಲ್ಲ. ಆದ್ದರಿಂದ ವಿಮರ್ಶಕರು ವ್ಯಕ್ತಿನಿಂದನೆಯ ಹಾದಿಯನ್ನು ಹಿಡಿಯದೆ ವಿಷಯಕ್ಕೆ ಬದ್ಧರಾಗಿ ಎಷ್ಟು ತೀಕ್ಷ್ಣವಾಗಿ ಖಂಡಿಸಿದರೂ ನಾನು ಸಂತೋಷಿಸುವೆನು.

೮—೧೨—೧೯೩೪ ಅ. ನ. ಕೃಷ್ಣರಾಯ